ಖುತ್‌ಬಾತ್-6

**ಸೈಯದ್ ಅಬುಲ್ ಆಲಾ ಮೌದೂದಿ**

ಅನುವಾದಕರು

**ಅಬ್ದುಸ್ಸಲಾಮ್ ಪುತ್ತಿಗೆ**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

## ಮುನ್ನುಡಿ

ಇಪ್ಪತ್ತನೇ ಶತಮಾನದ ಜಗದ್ವಿಖ್ಯಾತ ವಿದ್ವಾಂಸ ಮೌ| ಸೈಯದ್ ಅಬುಲ್ ಆಲಾ ಮೌದೂದಿಯವರ 'ಖುತ್‌ಬಾತ್' ಎಂಬ ಗ್ರಂಥದ ಆರನೆಯ ಭಾಗವಾದ 'ಜಿಹಾದ್'ನ ಕನ್ನಡಾನುವಾದ ನಿಮ್ಮ ಕೈಯಲ್ಲಿದೆ. ಇದು ಲೇಖಕರು 1938ರಲ್ಲಿ ಅಂದಿನ ಅವಿಭಜಿತ ಪಂಜಾಬಿನ ಪಠಾಣ್ ಕೋಟ್‌ನ ಸಮೀಪದ ಗ್ರಾಮದ ಮುಸ್ಲಿಮರಲ್ಲಿ ಧಾರ್ಮಿಕ ಪ್ರಜ್ಞೆ ಮೂಡಿಸಲು ಮಾಡಿದ 'ಶುಕ್ರವಾರ ಪ್ರವಚನ'ಗಳ ಸಂಕಲನವಾಗಿದೆ.

'ಜಿಹಾದ್' ಮುಸ್ಲಿಮರು ಅಗತ್ಯವಾಗಿ ನಿರ್ವಹಿಸಬೇಕಾದ ಒಂದು ಮಹತ್ಕಾರ್ಯ. ಇದರ ಅರ್ಥವ್ಯಾಪ್ತಿ, ಉದ್ದೇಶ, ನಿರ್ವಹಣಾ ವಿಧಾನ ಮುಂತಾದ ವಿಷಯಗಳನ್ನು ಸರಳವಾಗಿ ಉದಾಹರಣೆಗಳೊಂದಿಗೆ ಮನಮುಟ್ಟುವಂತೆ ವಿವರಿಸುವ ಶೈಲಿಯನ್ನು ಲೇಖಕರು ಇದರಲ್ಲಿ ಅಳವಡಿಸಿದ್ದಾರೆ. ಅವರ 'ಶುಕ್ರವಾರ ಪ್ರವಚನ'ಗಳ ಇತರ ಭಾಗಗಳಾದ ಈಮಾನ್, ಇಸ್ಲಾಮ್, ನಮಾಝ್ ಮತ್ತು ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ಗಳೆಲ್ಲದರಲ್ಲೂ ಅವರು ಇದೇ ಶೈಲಿಯನ್ನು ಅನುಸರಿಸಿದ್ದಾರೆ.

ಇದು ಈ ಕೃತಿಯ ತೃತೀಯ ಮುದ್ರಣ. ಉರ್ದು ಮತ್ತು ಇತರ ಅನುವಾದಿತ ಭಾಷೆಗಳಲ್ಲಿ ಲಕ್ಷಾಂತರ ಜನರಲ್ಲಿ ಜನಪ್ರಿಯವಾಗಿರುವ ಈ ಕೃತಿ ಕನ್ನಡಿಗರಾದ ಮುಸ್ಲಿಮ್-ಮುಸ್ಲಿಮೇತರರೆಲ್ಲರಿಗೂ ಉಪಯುಕ್ತವಾಗಲೆಂದು ಇದನ್ನು ಸಮರ್ಪಿಸುತ್ತಿದ್ದೇವೆ.

ಪ್ರಕಾಶಕರು

# ಜಿಹಾದ್

ಮುಸ್ಲಿಮ್ ಬಂಧುಗಳೇ,

ನಾನು ನಿಮಗೆ ಈ ಹಿಂದಿನ ಉಪನ್ಯಾಸಗಳಲ್ಲಿ ಪದೇ ಪದೇ ಸೂಚಿಸಿರುವಂತೆ, ಅಲ್ಲಾಹನು ನಿಮ್ಮ ಮೇಲೆ ಕಡ್ಡಾಯಗೊಳಿಸಿರುವ ಮತ್ತು ಇಸ್ಲಾಮಿನ ಆಧಾರಸ್ಥಂಬಗಳೆಂದು ಸಾರಿರುವ ನಮಾಝ್, ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್ ಎಂಬ ಕರ್ಮಗಳು ಇತರ ಕೆಲವು ಧರ್ಮಗಳಲ್ಲಿರುವ ಪೂಜಾ ವಿಧಿಗಳಂತೆ ಕೇವಲ ಪೂಜೆ, ಭಜನೆ, ಹರಕೆ, ಜಾತ್ರೆಗಳಂತಹ ಕಟ್ಟಳೆಗಳಲ್ಲ. ಆದ್ದರಿಂದ ನೀವು ಕೇವಲ ಇವುಗಳನ್ನು ನಿರ್ವಹಿಸಿದ ಮಾತ್ರಕ್ಕೆ ಅಲ್ಲಾಹನು ನಿಮ್ಮನ್ನು ಮೆಚ್ಚಿಬಿಡುವುದಿಲ್ಲ. ವಾಸ್ತವದಲ್ಲಿ ಒಂದು ಮಹೋನ್ನತ ಧ್ಯೇಯಕ್ಕಾಗಿ ನಿಮ್ಮನ್ನು ಸಿದ್ಧಗೊಳಿಸಲಿಕ್ಕಾಗಿ ಮತ್ತು ಒಂದು ಮಹತ್ಕಾರ್ಯದ ಸಾಧನೆಗಾಗಿ ನಿಮ್ಮನ್ನು ತರಬೇತಿಗೊಳಿಸುವ ಉಪಕ್ರಮವಾಗಿ ಇವುಗಳನ್ನು ನಿಮ್ಮ ಮೇಲೆ ಕಡ್ಡಾಯಗೊಳಿಸಲಾಗಿದೆ. ಈ ತಯಾರಿ ಮತ್ತು ತರಬೇತಿಯ ವಿಧಿ ವಿಧಾನಗಳನ್ನು ಈಗಾಗಲೇ ನಾನು ವಿವರವಾಗಿ ಚರ್ಚಿಸಿರುವುದರಿಂದ ಇದೀಗ ಈ ಸಿದ್ಧತೆಗಳನ್ನೆಲ್ಲಾ ಯಾವ ಉದ್ದೇಶಕ್ಕಾಗಿ ಮಾಡಲಾಗುತ್ತಿದೆ ಎಂಬುದನ್ನು ತಿಳಿಸಬೇಕಾದ ಸಮಯ ಬಂದಿದೆ.

ಬಹಳ ಸಂಕ್ಷಿಪ್ತವಾಗಿ ಹೇಳುವುದಾದರೆ, ಮಾನವನ ಮೇಲೆ ಮಾನವನ ಪ್ರಭುತ್ವವನ್ನು ಕೊನೆಗಾಣಿಸಿ ಅಲ್ಲಾಹನ ಪ್ರಭುತ್ವವನ್ನು ಸಂಸ್ಥಾಪಿಸ ಬೇಕೆಂಬುದೇ ಆ ಉದ್ದೇಶವಾಗಿದೆ. ಈ ಉದ್ದೇಶಕ್ಕಾಗಿ ತನು-ಮನಗಳನ್ನು ತೊಡಗಿಸಿ ಹೋರಾಡುವುದಕ್ಕೆ ಜಿಹಾದ್ ಎನ್ನುತ್ತಾರೆ. ನಮಾಝ್, ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ಗಳ ಗುರಿಯು ಈ ಕಾರ್ಯಕ್ಕಾಗಿ ಮಾನವರನ್ನು ಸಿದ್ಧಗೊಳಿಸುವುದೇ ಆಗಿದೆ. ಆದರೆ ಕಳೆದ ದೀರ್ಘ ಕಾಲದಿಂದ ನೀವು ಈ ಉದ್ದೇಶವನ್ನೇ ಮರೆತು ಬಿಟ್ಟಿರುವುದರಿಂದ ಮತ್ತು ಈ ಇಬಾದತ್‌ಗಳೆಲ್ಲವೂ ನಿಮ್ಮ ದೃಷ್ಟಿಯಲ್ಲಿ ಕೇವಲ ಆಧ್ಯಾತ್ಮಿಕ ಕಟ್ಟಳೆಗಳಾಗಿ ಬಿಟ್ಟಿರುವುದರಿಂದ ನನ್ನ ಪ್ರಸ್ತುತ ಸಂಕ್ಷಿಪ್ತ ಹೇಳಿಕೆಯು ನಿಮ್ಮ ಪಾಲಿಗೆ ಕೇವಲ ಒಂದು ಒಗಟಾಗಿ ಉಳಿಯ ಬಹುದು. ಆದುದರಿಂದ ನಾನಿಲ್ಲಿ ಈ ಉದ್ದೇಶವನ್ನು ತುಸು ವಿಸ್ತಾರವಾಗಿ ವಿವರಿಸುತ್ತಿದ್ದೇನೆ.

ನೀವಿಂದು ಜಗತ್ತಿನಲ್ಲಿ ಕಾಣುತ್ತಿರುವ ಹೆಚ್ಚಿನೆಲ್ಲಾ ದೋಷಗಳಿಗೆ ಮೂಲತಃ ಸರಕಾರದ ದೋಷವೇ ಕಾರಣವಾಗಿದೆ. ಶಕ್ತಿ ಮತ್ತು ಸಂಪತ್ತು ಯಾವಾಗಲೂ ಸರಕಾರದ ಕೈಯಲ್ಲಿರುತ್ತದೆ. ಕಾನೂನುಗಳನ್ನು ಸರಕಾರವೇ ನಿರ್ಮಿಸುತ್ತದೆ. ಆಡಳಿತ ನಿರ್ವಹಣೆಗೆ ಸಂಬಂಧಿಸಿದ ಎಲ್ಲ ಅಧಿಕಾರಗಳು ಸರಕಾರದ ನಿಯಂತ್ರಣದಲ್ಲಿರುತ್ತವೆ. ಪೊಲೀಸ್ ಮತ್ತು ಸೇನೆಯ ಬಲ ಸರಕಾರದ ಮುಷ್ಟಿಯಲ್ಲಿರುತ್ತದೆ. ಆದ್ದರಿಂದ ಜನರ ನಡುವೆ ಹರಡುವ ಕೆಡುಕುಗಳೆಲ್ಲಾ ಒಂದೋ ಸರಕಾರವೇ ಹರಡಿದ ಕೆಡುಕುಗಳಾಗಿರುತ್ತವೆ, ಅದಲ್ಲವಾದರೆ ಸರಕಾರದ ಬೆಂಬಲದಿಂದ ಹರಡಲ್ಪಟ್ಟ ಕೆಡುಕುಗಳಾಗಿರುತ್ತವೆ. ಏಕೆಂದರೆ ಯಾವುದಾದರೂ ಕೆಡುಕನ್ನು ವ್ಯಾಪಕವಾಗಿ ಹರಡಲು ಬೇಕಾಗುವಂತಹ ಶಕ್ತಿಯು ಸರಕಾರದ ಬಳಿಯೇ ಇರುತ್ತದೆ. ಉದಾಹರಣೆಗೆ, ಬಹಿರಂಗವಾಗಿ ವ್ಯಭಿಚಾರ ನಡೆಯುತ್ತಿರುವುದನ್ನು ಮತ್ತು ಹಾಡು ಹಗಲಲ್ಲೇ ವೇಶ್ಯಾವಾಟಿಕೆಗಳಲ್ಲಿ ಈ ವ್ಯವಹಾರವು ರಾಜಾರೋಷವಾಗಿ ನಡೆಯುತ್ತಿರುವುದನ್ನು ನೀವು ಕಾಣುತ್ತಿರುವಿರಿ. ಇದಕ್ಕೆ ಕಾರಣವೇನು? ಇದಕ್ಕಿರುವ ಒಂದೇ ಒಂದು ಕಾರಣ ಸರಕಾರೀ ಅಧಿಕಾರಗಳು ಯಾರ ಕೈಯಲ್ಲಿವೆಯೋ ಅವರ ದೃಷ್ಟಿಯಲ್ಲಿ ವ್ಯಭಿಚಾರವೆಂಬುದು ಒಂದು ಅಪರಾಧವೇ ಅಲ್ಲ. ಅವರು ಈ ಕುಕೃತ್ಯವನ್ನು ಸ್ವತಃ ತಾವೂ ಮಾಡುತ್ತಾರೆ ಮತ್ತು ಇತರರಿಗೂ ಮಾಡಲು ಬಿಡುತ್ತಾರೆ. ಅನ್ಯಥಾ, ಈ ಅನೈತಿಕತೆಯನ್ನು ನಿಲ್ಲಿಸಿ ಬಿಡಲು ಅವರು ಮನಸ್ಸು ಮಾಡಿದ್ದರೆ ಇದು ಇಷ್ಟು ರಾಜಾರೋಷವಾಗಿ ನಡೆಯಲು ಖಂಡಿತ ಸಾಧ್ಯವಿರಲಿಲ್ಲ. ಸಮಾಜದಲ್ಲಿ ಬಡ್ಡಿ ವ್ಯವಹಾರವು ಬಹಳ ವ್ಯಾಪಕವಾಗಿ ನಡೆಯುತ್ತಿದ್ದು ಶ್ರೀಮಂತರು ಬಡವರ ರಕ್ತ ಹೀರುತ್ತಿರುವುದನ್ನು ನೀವು ಕಾಣುತ್ತೀರಿ. ಇದು ಹೇಗೆ ಸಾಧ್ಯವಾಯಿತು? ನಿಜವಾಗಿ ಸ್ವತಃ ನಮ್ಮ ಸರಕಾರವೇ ಬಡ್ಡಿ ತಿನ್ನುತ್ತಿರುವುದು, ಬಡ್ಡಿ ತಿನ್ನುವವರಿಗೆ ನೆರವು ನೀಡುತ್ತಿರುವುದು, ಸರಕಾರದ ಸಂಸ್ಥೆಗಳು ಬಡ್ಡಿಕೋರರಿಗೆ ಮಾನ್ಯತೆ ನೀಡುತ್ತಿರುವುದು ಮತ್ತು ಅದರ ಶ್ರೀರಕ್ಷೆಯಲ್ಲೇ ದೊಡ್ಡ ಸಾಹುಕಾರರು ಮತ್ತು ಬ್ಯಾಂಕುಗಳು ತಮ್ಮ ವ್ಯವಹಾರ ನಡೆಸುತ್ತಿರುವುದೇ ಈ ಅವಸ್ಥೆಗೆ ಕಾರಣವಾಗಿದೆ.

ಸಮಾಜದಲ್ಲಿ ಅಶ್ಲೀಲತೆ ಮತ್ತು ಅನೈತಿಕತೆಗಳು ದಿನೇ ದಿನೇ ಹೆಚ್ಚುತ್ತಿರುವುದನ್ನು ನೀವು ಕಾಣುತ್ತಿರುವಿರಿ. ಸರಕಾರವು ಜನರ ಶಿಕ್ಷಣ ಮತ್ತು ತರಬೇತಿಗೆ ಒದಗಿಸಿರುವಂತಹ ವ್ಯವಸ್ಥೆಯ ಸ್ವರೂಪವೇ ಇದಕ್ಕೆ ಕಾರಣ. ಚಾರಿತ್ರ್ಯ ಮತ್ತು ನೈತಿಕತೆಯ ರಂಗದಲ್ಲಿ

ಇಂದು ಕಾಣಿಸುತ್ತಿರುವಂತಹ ಮಾದರಿಗಳನ್ನೇ ಸರಕಾರ ಇಷ್ಟ ಪಡುತ್ತದೆ. ನೀವೀಗ ಜನರಿಗೆ ಬೇರೊಂದು ಬಗೆಯ ಶಿಕ್ಷಣ ಮತ್ತು ತರಬೇತಿ ನೀಡಿ ಇಂದಿನವರಿಗಿಂತ ಭಿನ್ನವಾದ ಚಾರಿತ್ರ್ಯದ ಜನರನ್ನು ತಯಾರಿಸ ಬಯಸಿದರೆ ಅದಕ್ಕೆ ಬೇಕಾದ ಸೌಲಭ್ಯಗಳನ್ನು ಎಲ್ಲಿಂದ ತರುವಿರಿ? ಇನ್ನು ನೀವು ಅಂತಹ ಕೆಲವು ಸಜ್ಜನರನ್ನು ನಿರ್ಮಾಣ ಮಾಡಿದರೂ ಅವರು ಸಲ್ಲುವುದೆಲ್ಲಿ? ಉದ್ಯೋಗ, ವೃತ್ತಿ ಮತ್ತಿತರ ಕ್ಷೇತ್ರ ಗಳೆಲ್ಲಾ ನೇರವಾಗಿ ಅಥವಾ ಪರೋಕ್ಷವಾಗಿ ಸರಕಾರದ ನಿಯಂತ್ರಣದಲ್ಲೇ ಇವೆ.

ನೀವಿಂದು ಜಗತ್ತಿನಲ್ಲಿ ವ್ಯಾಪಕ ರಕ್ತಪಾತವನ್ನು ಕಾಣುತ್ತಿದ್ದೀರಿ. ಮಾನವನ ಜ್ಞಾನವೆಲ್ಲಾ ಮಾನವನ ವಿನಾಶಕ್ಕಾಗಿಯೇ ವಿನಿಯೋಗಿಸಲ್ಪಡುತ್ತಿದೆ. ಮನುಷ್ಯನ ಪರಿಶ್ರಮದ ಫಲಗಳೆಲ್ಲಾ ಬೆಂಕಿಗಾಹುತಿಯಾಗುತ್ತಿವೆ. ಅಮೂಲ್ಯ ಮಾನವ ಜೀವಗಳನ್ನು ನಿರ್ದಯವಾಗಿ ಹರಣ ಮಾಡಲಾಗುತ್ತಿದೆ. ಇದಕ್ಕೆ ಕಾರಣವೇನೆಂದರೆ, ಮಾನವರ ಪೈಕಿ ಅತ್ಯಂತ ಕೀಳ್ಮಟ್ಟದ ದುಷ್ಟ ದುರಾತ್ಮರೇ ಜಗತ್ತಿನ ವಿವಿಧ ರಾಷ್ಟ್ರಗಳ ಆಡಳಿತ ಸೂತ್ರಗಳನ್ನು ಹಿಡಿದುಕೊಂಡಿದ್ದಾರೆ. ಶಕ್ತಿಯು ಇಂದು ಅವರ ಕೈಯಲ್ಲಿದೆ. ಆದ್ದರಿಂದ ಅವರು ನಡೆಸಿದ ದಿಕ್ಕಿನಲ್ಲೇ ಜಗತ್ತು ನಡೆಯುತ್ತಿದೆ. ಜೀವ, ಜ್ಞಾನ, ಸಂಪತ್ತು, ಪರಿಶ್ರಮ ಇವೆಲ್ಲಾ ಅವರು ವಿನಿಯೋಗಿಸ ಬಯಸುವಂತಹ ಸ್ಥಳಗಳಲ್ಲೇ ವಿನಿಯೋಗಿಸಲ್ಪಡುತ್ತಿವೆ.

ಲೋಕದಲ್ಲಿಂದು ಎಲ್ಲೆಡೆಯೂ ಅಕ್ರಮ, ಅನ್ಯಾಯಗಳು ನಡೆಯುತ್ತಿರುವುದನ್ನು ನೀವು ನೋಡುತ್ತೀರಿ. ದುರ್ಬಲರಿಗೆ ಎಲ್ಲೂ ನ್ಯಾಯ ದೊರೆಯುವುದಿಲ್ಲ. ಬಡವರ ಪಾಲಿಗೆ ಜೀವನವೇ ದುಸ್ತರವಾಗಿ ಬಿಟ್ಟಿದೆ. ನ್ಯಾಯಾಲಯಗಳು ಕೇವಲ ಹಣ ಚೆಲ್ಲುವವರಿಗೆ ನ್ಯಾಯವೊದಗಿಸುವ ಅಂಗಡಿಗಳಾಗಿ ಬಿಟ್ಟಿವೆ. ಜನತೆಯಿಂದ ತೆರಿಗೆಯ ಹೆಸರಲ್ಲಿ ಅಪಾರ ಹಣ ದೋಚಿ ಅದನ್ನು ರಾಜಕಾರಣಿಗಳ ಭೋಗ ವಿಲಾಸಕ್ಕೆ, ಅಧಿಕಾರಿಗಳ ದುಬಾರಿ ವೇತನಗಳಿಗೆ, ಭವ್ಯ ಕಟ್ಟಡಗಳ ನಿರ್ಮಾಣಕ್ಕೆ, ಶಸ್ತ್ರಾಸ್ತ್ರ ಖರೀದಿಗೆ ಮತ್ತು ಇಂತಹದೇ ಇತರ ಕಾರ್ಯಗಳಿಗೆ ವಿನಿಯೋಗಿಸಿ ಪೋಲುಗೊಳಿಸಲಾಗುತ್ತಿದೆ. ಸಾಹುಕಾರರು, ಜಮೀನ್ದಾರರು, ಶ್ರೀಮಂತರು, ಪುಢಾರಿಗಳು, ಪೀಠಾಧಿಪತಿಗಳು, ಧರ್ಮಾಧಿಕಾರಿಗಳು, ಸಿನಿಮಾ ಮಂದಿರಗಳ ಮಾಲಕರು, ಮದ್ಯ ವ್ಯಾಪಾರಿಗಳು, ಅಶ್ಲೀಲ ಪುಸ್ತಕ- ಪತ್ರಿಕೆ ಇತ್ಯಾದಿಗಳ ಪ್ರಕಾಶಕರು, ಜೂಜು ಕೇಂದ್ರಗಳನ್ನು ನಡೆಸುವವರು ಮತ್ತು ಇಂತಹ ಇತರ ಅನೇಕರು ಜನ ಸಾಮಾನ್ಯರ

ಜೀವ, ಸೊತ್ತು, ಗೌರವ, ಚಾರಿತ್ರ್ಯ ಎಲ್ಲವನ್ನೂ ಸೂರೆಗೈಯುತ್ತಿದ್ದಾರೆ. ಇವರನ್ನೆಲ್ಲಾ ತಡೆಯುವವರು ಯಾರೂ ಇಲ್ಲವಾಗಿದ್ದಾರೆ. ಇದಕ್ಕೆಲ್ಲಾ ಕಾರಣ ಒಂದೇ. ಸರಕಾರ ಸಂಪೂರ್ಣ ಭ್ರಷ್ಟವಾಗಿ ಬಿಟ್ಟಿದೆ. ಯಾರ ಕೈಯಲ್ಲಿ ಅಧಿಕಾರ ಸೂತ್ರಗಳಿವೆಯೋ ಅವರು ಕೆಟ್ಟವರಾಗಿ ಬಿಟ್ಟಿದ್ದಾರೆ. ಅವರು ಸ್ವತಃ ತಾವೂ ಅಕ್ರಮ ಮಾಡುತ್ತಾರೆ, ಇತರ ಅಕ್ರಮಿಗಳಿಗೆ ಬೆಂಬಲವನ್ನೂ ನೀಡುತ್ತಾರೆ. ಇಲ್ಲಿ ನಡೆಯುತ್ತಿರುವ ಅನ್ಯಾಯಗಳೆಲ್ಲಾ ಒಂದೋ ಈ ಆಡಳಿತಾರೂಢರು ಸ್ವತಃ ಇವುಗಳನ್ನು ಬಯಸುವುದರಿಂದಾಗಿ, ಅದಲ್ಲವಾದರೆ ಅವರು ಇವುಗಳನ್ನು ತಣ್ಣಗೆ ಸಹಿಸಿಕೊಳ್ಳುತ್ತಿರುವುದರಿಂದಾಗಿ ಮಾತ್ರ ನಡೆಯುತ್ತಿವೆ.

ಈ ಉದಾಹರಣೆಗಳಿಂದ ಒಂದು ವಿಷಯವು ಈಗಾಗಲೇ ನಿಮಗೆ ಮನವರಿಕೆ ಆಗಿರಬಹುದು. ಅದೇನೆಂದರೆ ಸರಕಾರದ ಭ್ರಷ್ಟತೆಯೇ ಎಲ್ಲ ಭ್ರಷ್ಟತೆಗಳ ಮೂಲವಾಗಿದೆ. ಜನರ ವಿಚಾರಗಳು ಮಲಿನವಾಗುವುದು, ಚಾರಿತ್ರ್ಯ ಕೆಟ್ಟು ಹೋಗುವುದು, ಮಾನವರ ಸಾಮರ್ಥ್ಯ ಮತ್ತು ಪ್ರತಿಭೆಗಳೆಲ್ಲಾ ತಪ್ಪು ಹಾದಿಗಳಲ್ಲಿ ದುರ್ಬಳಕೆಯಾಗುತ್ತಿರುವುದು, ವ್ಯಾಪಾರ ವ್ಯವಹಾರಗಳ ದುಷ್ಟ ವಿಧಾನಗಳು ಚಲಾವಣೆಗೆ ಬರುವುದು, ತೀರಾ ಕೆಟ್ಟ ಜೀವನ ಕ್ರಮಗಳು ಜನಪ್ರಿಯವಾಗಿ ಬಿಡುವುದು, ಅನ್ಯಾಯ, ಅಕ್ರಮ ಮತ್ತು ದುಷ್ಕೃತ್ಯಗಳು ವ್ಯಾಪಕವಾಗಿ ಹರಡುವುದು, ಮಾನವ ಸಮಾಜ ನಾಶವಾಗುವುದು ಇವೆಲ್ಲಾ ಸಮಾಜದ ಆಡಳಿತ ಸೂತ್ರವು ದುಷ್ಟರ ಕೈಗಳಲ್ಲಿ ಇರುವುದರ ಫಲಿತಾಂಶಗಳಾಗಿವೆ. ಆಡಳಿತದ ಚುಕ್ಕಾಣಿಯು ದುಷ್ಟರ ಮುಷ್ಟಿಯಲ್ಲಿ ಕೈದಿಯಾದಾಗ ಮತ್ತು ಜನಸಾಮಾನ್ಯರ ಜೀವನಾಧಾರಗಳೆಲ್ಲಾ ಇಂತಹವರ ನಿಯಂತ್ರಣದಲ್ಲಿದ್ದಾಗ ಅವರು ಕೆಡುಕನ್ನೇ ಹಬ್ಬಿಸುವರು ಮತ್ತು ಸಮಾಜದಲ್ಲಿ ಹರಡುವ ಎಲ್ಲ ಬಗೆಯ ಕೆಡುಕುಗಳಿಗೆ ಈ ವರ್ಗದವರ ಕುಮ್ಮಕ್ಕೇ ಕಾರಣವಾಗಿರುವುದು ಎಂಬುದು ವ್ಯಕ್ತ. ಆದ್ದರಿಂದಲೇ ಸಮಾಜದ ಆಡಳಿತಾಧಿಕಾರಿಗಳು ಇಂತಹವರ ಕಪಿಮುಷ್ಟಿಯಲ್ಲಿರುವ ತನಕ ಯಾವ ರಂಗದಲ್ಲೂ ಸುಧಾರಣೆಯಾಗಲು ಸಾಧ್ಯವೇ ಇಲ್ಲ.

ಇದಿಷ್ಟು ನಿಮಗೆ ಮನವರಿಕೆಯಾದ ಬಳಿಕ, ಸರಕಾರದಲ್ಲಿರುವ ದೋಷವನ್ನು ನಿವಾರಿಸದೆ ಜನತೆಯನ್ನು ಸುಧಾರಿಸಲು ಮತ್ತು ಅವರನ್ನು ವಿನಾಶದ ಹಾದಿಯಿಂದ ರಕ್ಷಿಸಿ ಕಲ್ಯಾಣ ಮತ್ತು ಸಾರ್ಥಕತೆಯ ಹಾದಿಯಲ್ಲಿ ತೊಡಗಿಸಲು ಸಾಧ್ಯವಿಲ್ಲ ಎಂಬುದು ನಿಮಗೆ ಸುಲಭವಾಗಿ ಅರ್ಥವಾಗುವುದು. ಯಾವ ಸಮಾಜದಲ್ಲಿ

ವ್ಯಭಿಚಾರ ಮಾಡಲು ಅವಕಾಶ ಮತ್ತು ಸ್ವಾತಂತ್ರ್ಯ ಇರುತ್ತದೋ ಅಲ್ಲಿ ವ್ಯಭಿಚಾರದ ವಿರುದ್ಧ ಜನರಿಗೆ ಎಷ್ಟೇ ಉಪದೇಶಗಳನ್ನು ನೀಡಿದರೂ ವ್ಯಭಿಚಾರವನ್ನು ಪೂರ್ಣವಾಗಿ ನಿಲ್ಲಿಸಿ ಬಿಡಲು ಸಾಧ್ಯವಿಲ್ಲವೆಂಬುದು ಸಾಮಾನ್ಯ ಬುದ್ಧಿಯುಳ್ಳವನಿಗೂ ಅರ್ಥವಾಗುತ್ತದೆ. ಆದರೆ ಸರಕಾರಕ್ಕಿರುವಂತಹ ಆಡಳಿತಾಧಿಕಾರವನ್ನು ಉಪಯೋಗಿಸಿಕೊಂಡು ಬಲಾತ್ಕಾರವಾಗಿ ವ್ಯಭಿಚಾರಕ್ಕೆ ತಡೆ ಹಾಕಿಬಿಟ್ಟರೆ ಜನರು ತಾವಾಗಿಯೇ ಧರ್ಮಬಾಹಿರ ಮಾರ್ಗವನ್ನು ಕೈಬಿಟ್ಟು ಧರ್ಮಬದ್ಧವಾದ ದಾರಿ ಹಿಡಿಯುತ್ತಾರೆ. ಹಾಗೆಯೇ ಶರಾಬು, ಜೂಜು, ಲಂಚ, ಅಶ್ಲೀಲ ಕಾರ್ಯಕ್ರಮಗಳು, ನಿರ್ಲಜ್ಜ ವಸ್ತ್ರಧಾರಣೆ, ಚಾರಿತ್ರ್ಯ ನಾಶ ಮಾಡುವ ಶಿಕ್ಷಣ ವ್ಯವಸ್ಥೆ ಮುಂತಾದ ಅನಿಷ್ಟಗಳನ್ನೆಲ್ಲಾ ಕೇವಲ ಬೋಧನೆಗಳ ಮೂಲಕ ನಿರ್ಮೂಲನ ಮಾಡಬಯಸಿದರೆ ನೀವು ಖಂಡಿತ ಯಶಸ್ವಿಯಾಗಲಾರಿರಿ. ಆದರೆ ಅಧಿಕಾರದ ಬಲದಿಂದ ಈ ಅನಿಷ್ಟಗಳನ್ನು ತೊಡೆದು ಹಾಕಲು ಖಂಡಿತ ಸಾಧ್ಯವಿದೆ.ಜನತೆಯನ್ನು ದೋಚುತ್ತಿರುವ ಮತ್ತು ಅವರ ಚಾರಿತ್ರ್ಯವನ್ನು ನಾಶ ಮಾಡುತ್ತಿರುವ ಜನರೆಲ್ಲಾ ಕೇವಲ ನಿಮ್ಮ ಬೋಧನೆ ಮತ್ತು ಉಪನ್ಯಾಸಗಳಿಂದ ಪ್ರಭಾವಿತರಾಗಿ ತಮ್ಮ ಪ್ರಸ್ತುತ 'ಲಾಭದಾಯಕ' ಚಟುವಟಿಕೆಗಳಿಗೆ ವಿದಾಯ ಹೇಳುವರೆಂದು ನಿರೀಕ್ಷಿಸುವುದು ಖಂಡಿತ ವ್ಯರ್ಥ. ಇಂತಹವರ ಸಮಾಜದಲ್ಲಿ ಅಧಿಕಾರವನ್ನು ಕೈಗೆ ತೆಗೆದುಕೊಂಡು ಇವರ ಕಿಡಿಗೇಡಿ ಚಟುವಟಿಕೆಗಳನ್ನು ಬಲ ಪ್ರಯೋಗಿಸಿ ಕೊನೆಗಾಣಿಸಿದಾಗ ಮಾತ್ರ ಈ ಕೆಡುಕುಗಳು ನಿರ್ಮೂಲನವಾಗಲು ಸಾಧ್ಯ.

ಜನತೆಯ ಶ್ರಮ, ಸಂಪತ್ತು, ಬುದ್ಧಿ ಮತ್ತು ಪ್ರತಿಭೆಗಳು ಕೆಟ್ಟ ಹಾದಿಗಳಲ್ಲಿ ಪೋಲಾಗದೆ ಸರಿಯಾದ ಹಾದಿಯಲ್ಲಿ ಬಳಸಲ್ಪಡಬೇಕು, ಅನ್ಯಾಯ ಅಳಿದು ನ್ಯಾಯ ಮೆರೆಯಬೇಕು, ಭೂಮಿಯಲ್ಲಿ ಅಶಾಂತಿ-ಪ್ರಕ್ಷೋಭೆಗಳು ಇರಬಾರದು, ಮನುಷ್ಯನು ಮನುಷ್ಯನ ರಕ್ತ ಹೀರಬಾರದು, ಯಾರೂ ಯಾರದೇ ರಕ್ತ ಹರಿಸಬಾರದು, ತುಳಿಯಲ್ಪಟ್ಟ ಮತ್ತು ಮರ್ದಿತ ಜನವರ್ಗಗಳು ಮೇಲೆತ್ತಲ್ಪಡಬೇಕು, ಸಕಲ ಮಾನವರಿಗೂ ಸಮಾನ ಗೌರವ, ಶಾಂತಿ, ಭದ್ರತೆ, ಸಂಪನ್ನತೆ ಮತ್ತು ಪ್ರಗತಿಯ ಅವಕಾಶಗಳು ದೊರೆಯಬೇಕು ಎಂದೆಲ್ಲಾ ನೀವು ಅಪೇಕ್ಷಿಸುತ್ತಿದ್ದೀರಿ ಎಂದಾದರೆ ಕೇವಲ ಉಪದೇಶಗಳಿಂದ ನಿಮ್ಮ ಈ ಅಪೇಕ್ಷೆಗಳು ಈಡೇರಲಾರವು. ಸರಕಾರದ ಶಕ್ತಿ ನಿಮ್ಮ ಕೈಯಲ್ಲಿದ್ದಾಗ ಮಾತ್ರ ನೀವು ಈ ಎಲ್ಲ ಕಾರ್ಯಗಳನ್ನು ಸಾಧಿಸಬಲ್ಲಿರಿ.

ಒಟ್ಟಿನಲ್ಲಿ, ಕೈಯಲ್ಲಿ ಅಧಿಕಾರವಿಲ್ಲದಿದ್ದರೆ ಸಮಾಜದ ಸುಧಾರಣೆಯ ಯಾವ ಯೋಜನೆಯೂ ಯಶಸ್ವಿಯಾಗಲಾರದು ಎಂಬುದು ಹೆಚ್ಚು ಚಿಂತನೆ ಮಾಡದೆಯೇ ಅರ್ಥವಾಗಿ ಬಿಡುವಂತಹ ಒಂದು ಸುವ್ಯಕ್ತವಾದ ಸರಳ ವಾಸ್ತವಿಕತೆಯಾಗಿದೆ. ಅಲ್ಲಾಹನ ಈ ಭೂಮಿ ಕೆಡುಕುಗಳಿಂದ ಮುಕ್ತವಾಗಬೇಕು ಮತ್ತು ಮಾನವರ ಸುಧಾರಣೆ ಆಗಬೇಕು ಎಂದು ಬಯಸುವಾತನು ಕೇವಲ ಉಪದೇಶಕನಾಗುವುದು ವ್ಯರ್ಥ. ಅವನು ಮುಂದೆ ಬಂದು ತಪ್ಪು ಬುನಾದಿಗಳಲ್ಲಿ ಕಟ್ಟಲ್ಪಟ್ಟಿರುವಂತಹ ಆಡಳಿತ ವ್ಯವಸ್ಥೆಯನ್ನು ಕೊನೆಗಾಣಿಸಿ, ದುಷ್ಟರ ಕೈಗಳಿಂದ ಅಧಿಕಾರವನ್ನು ಕಿತ್ತುಕೊಂಡು ಸರಿಯಾದ ತತ್ವಾದರ್ಶಗಳ ಆಧಾರದಲ್ಲಿ ಸರಿಯಾದ ವಿಧಾನದಿಂದ ನಡೆಯುವ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಬೇಕು.

ಇಷ್ಟನ್ನು ಮನನ ಮಾಡಿಕೊಂಡ ಬಳಿಕ ಇದೀಗ ನಾವು ಇನ್ನೊಂದು ಹೆಜ್ಜೆ ಮುಂದೆ ಹೋಗೋಣ. ಜನತೆಯ ಜೀವನಗಳಲ್ಲಿ ಹರಡುವಂತಹ ಕೆಡುಕುಗಳಿಗೆ ಆಡಳಿತ ವ್ಯವಸ್ಥೆಯ ದೋಷವೇ ಮೂಲ ಕಾರಣವಾಗಿದ್ದು ಜನತೆಯನ್ನು ಸುಧಾರಿಸಬೇಕಿದ್ದರೆ ಈ ಮೂಲ ದೋಷವನ್ನೇ ನಿವಾರಿಸಬೇಕಾದುದು ಅನಿವಾರ್ಯ ಎಂಬುದನ್ನು ಈಗಾಗಲೇ ನೀವು ತಿಳಿದುಕೊಂಡಿರಿ. ಇಲ್ಲೀಗ, ಈ ಆಡಳಿತ ವ್ಯವಸ್ಥೆ ಕೆಟ್ಟು ಹೋಗಲು ಪ್ರಮುಖ ಕಾರಣವೇನು? ಈ ದೋಷದ ಬೇರು ಎಲ್ಲಿದೆ? ಮೇಲೆ ಪ್ರಸ್ತಾಪಿಸಿದಂತಹ ಕೆಡುಕುಗಳು ಹುಟ್ಟದಂತೆ ತಡೆಯಲು ಮಾಡಬೇಕಾದ ಮೂಲಭೂತ ಸುಧಾರಣೆ ಯಾವುದು? ಎಂಬ ಪ್ರಶ್ನೆಗಳು ತಲೆಯೆತ್ತುತ್ತವೆ.

ಈ ಪ್ರಶ್ನೆಗಳಿಗೆ ಉತ್ತರವೇನೆಂದರೆ ಮನುಷ್ಯನ ಮೇಲೆ ಮನುಷ್ಯನ ಆಡಳಿತವೇ ಎಲ್ಲ ಕೆಡುಕುಗಳ ಮೂಲವಾಗಿದ್ದು, ಮನುಷ್ಯನ ಮೇಲೆ ಅಲ್ಲಾಹನ ಆಡಳಿತ ನಡೆಯುವಂತೆ ಮಾಡುವುದೇ ಸುಧಾರಣೆಯ ಏಕೈಕ ಮಾರ್ಗವಾಗಿದೆ. ಅಷ್ಟು ದೊಡ್ಡ ಪ್ರಶ್ನೆಗೆ ಇಷ್ಟು ಸಂಕ್ಷಿಪ್ತವಾದ ಉತ್ತರ ಕೇಳಿ ನೀವು ಆಶ್ಚರ್ಯ ಪಡಬೇಕಾಗಿಲ್ಲ. ನೀವು ಈ ಪ್ರಶ್ನೆಗಳ ಬಗ್ಗೆ ಎಷ್ಟು ಚಿಂತನೆ ಮಾಡಿದರೂ ಎಷ್ಟು ಸಂಶೋಧನೆಗಳನ್ನು ನಡೆಸಿದರೂ ಅಂತಿಮವಾಗಿ ನಿಮಗೆ ಇದೇ ಉತ್ತರ ಸಿಗಲಿದೆ.

ಸ್ವಲ್ಪ ಚಿಂತಿಸಿ ನೋಡಿ, ನೀವು ವಾಸಿಸುತ್ತಿರುವ ಈ ಭೂಮಿಯನ್ನು ನಿರ್ಮಿಸಿದ್ದು ಅಲ್ಲಾಹನೋ ಇತರರೋ? ಭೂಮಿಯಲ್ಲಿರುವ ಈ ಮಾನವರನ್ನು ಸೃಷ್ಟಿಸಿದ್ದು ಅಲ್ಲಾಹನೋ ಇತರರೋ? ಈ ಮಾನವರೆಲ್ಲಾ ಯಾವ ಜೀವನಾಧಾರಗಳನ್ನು

ಬಳಸುತ್ತಾ ಜೀವಿಸುತ್ತಿರುವವರೋ ಅವುಗಳನ್ನು ಒದಗಿಸಿದ್ದು ಅಲ್ಲಾಹನೋ ಅಥವಾ ಇತರರೋ? ಭೂಮಿಯನ್ನು, ಮಾನವರನ್ನು ಮತ್ತು ಈ ಎಲ್ಲ ಜೀವನಾವಶ್ಯಕ ಸೌಲಭ್ಯಗಳನ್ನು ಅಲ್ಲಾಹನೇ ಸೃಷ್ಟಿಸಿದನೆಂಬುದೇ ಈ ಎಲ್ಲ ಪ್ರಶ್ನೆಗಳಿಗಿರುವ ಉತ್ತರವೆಂದಾದರೆ, ಸಾಮ್ರಾಜ್ಯವೂ ಅಲ್ಲಾಹನದು, ಖಜಾನೆಯೂ ಅಲ್ಲಾಹನದು ಮತ್ತು ಪ್ರಜೆಗಳೂ ಅಲ್ಲಾಹನ ಪ್ರಜೆಗಳು ಎಂದಾಯಿತು. ಹೀಗಿರುತ್ತಾ ಈ ದೇವ ನಿರ್ಮಿತ ಜಗತ್ತಿನಲ್ಲಿ ತನ್ನ ಅಧಿಕಾರ ನಡೆಸಲು ಅವನ ಹೊರತು ಇತರ ಯಾರಾದರೂ ಹಕ್ಕುದಾರರಾಗಲು ಹೇಗೆ ಸಾಧ್ಯ? ಅಲ್ಲಾಹನ ಭೂಮಿಯಲ್ಲಿ, ಅವನ ಪ್ರಜೆಗಳು ತಮ್ಮ ಸ್ವಂತ ಕಾನೂನುಗಳನ್ನು ಜಾರಿಗೊಳಿಸಿದರೆ ಅದು ಹೇಗೆ ತಾನೇ ಸಮಂಜಸವೆನಿಸೀತು? ಒಬ್ಬನ ದೇಶದಲ್ಲಿ ಇನ್ನೊಬ್ಬನು ರಾಜ್ಯಭಾರ ನಡೆಸುವುದು, ಒಬ್ಬನ ಸೊತ್ತಿಗೆ ಇನ್ನೊಬ್ಬನು ಮಾಲಕನಾಗಿ ಬಿಡುವುದು, ಯಾರದೋ ಪ್ರಜೆಗಳ ಮೇಲೆ ಯಾರೋ ಪ್ರಭುತ್ವ ನಡೆಸುವುದು- ಇದನ್ನು ನಿಮ್ಮ ವಿವೇಕವು ಹೇಗೆ ತಾನೇ ಸ್ವೀಕರಿಸಿಕೊಳ್ಳಬಲ್ಲುದು? ಹೀಗೆಲ್ಲಾ ಆಗುವುದು ಸತ್ಯ ಮತ್ತು ನ್ಯಾಯಕ್ಕೆ ವಿರುದ್ಧವಾಗಿದೆ. ಆದ್ದರಿಂದ ಹೀಗಾದಾಗಲೆಲ್ಲಾ ಅದರಿಂದ ಕೆಟ್ಟ ಫಲಿತಾಂಶಗಳೇ ಹೊರಡುತ್ತವೆ. ಕಾನೂನು ನಿರ್ಮಿಸುವ ಮತ್ತು ಆಡಳಿತ ನಡೆಸುವ ಅಧಿಕಾರ ಮನುಷ್ಯರ ಕೈಗೆ ಬರುತ್ತಲೇ ಅವರು ಅನಿವಾರ್ಯವಾಗಿ ತಮ್ಮ ಅಜ್ಞಾನದಿಂದ ಅನೇಕ ತಪ್ಪುಗಳನ್ನು ಮಾಡುತ್ತಾರೆ. ಇದು ಸಾಲದೆಂಬಂತೆ, ತಮ್ಮ ಸ್ವೇಚ್ಛೆಯನ್ನನುಸರಿಸುತ್ತಾ ಉದ್ದೇಶಪೂರ್ವಕವಾಗಿಯೂ ಅನೇಕ ಅಕ್ರಮ, ಅನ್ಯಾಯಗಳನ್ನು ಮಾಡಲಾರಂಭಿಸುತ್ತಾರೆ. ಏಕೆಂದರೆ ಮೊದಲನೆಯದಾಗಿ ಅವರ ಬಳಿ, ಜನರ ವ್ಯವಹಾರಗಳನ್ನೆಲ್ಲಾ ನಡೆಸಲು ಬೇಕಾದ ಸರಿಯಾದ ಕಾನೂನು, ನಿಯಮಗಳನ್ನು ರಚಿಸುವಷ್ಟು ಸಮಗ್ರ ಜ್ಞಾನ ಇರುವುದಿಲ್ಲ. ಇದಕ್ಕಿಂತಲೂ ಅಪಾಯಕಾರಿಯಾದ ಎರಡನೆಯ ಅಂಶವೇನೆಂದರೆ, ಅವರಲ್ಲಿ ದೇವ ಭಯವಾಗಲಿ, ಅವನೆದುರು ತಾವು ವಿಚಾರಣೆಗೆ ಒಳಗಾಗಲಿರುವವರು ಎಂಬ ಪ್ರಜ್ಞೆಯಾಗಲಿ ಇಲ್ಲದಿರುವುದರಿಂದ ಸ್ವಾಭಾವಿಕವಾಗಿಯೇ ಅವರು ನಿಯಂತ್ರಣ ತಪ್ಪಿದ ಮದ್ದಾನೆಯಂತಾಗುತ್ತಾರೆ. ದೇವಭಯವಾಗಲಿ, ಅವನ ವಿಚಾರಣೆಯ ಬಗೆಗಿನ ಪ್ರಜ್ಞೆಯಾಗಲಿ ಇಲ್ಲದ ಮತ್ತು ತನ್ನನ್ನು ಕೇಳುವವರಾರೂ ಇಲ್ಲವೆಂದು ಭಾವಿಸುವ ಮನುಷ್ಯನು ಈ ರೀತಿ ನಿರಂಕುಶನಾಗದೆ ಇರಲು ಸಾಧ್ಯವೇ ಇಲ್ಲ ಎಂಬುದು ಸುಲಭದಲ್ಲಿ ಅರ್ಥವಾಗುವ ವಿಷಯವಾಗಿದೆ. ಜನರ ಜೀವನಾಧಾರದ ಸೂತ್ರಗಳೆಲ್ಲಾ ಇಂತಹ ಒಬ್ಬ ವ್ಯಕ್ತಿಯ

ಮುಷ್ಠಿಯೊಳಗಿರುವಾಗ, ಜನರ ಪ್ರಾಣ, ಸಂಪತ್ತುಗಳಿಗೆಲ್ಲಾ ಅವನೇ ನಿಯಂತ್ರಕನಾದಾಗ ಮತ್ತು ಸಹಸ್ರಾರು ಮಂದಿಯ ಶಿರಗಳು ಅವನ ಮುಂದೆ ಬಾಗುತ್ತಿರುವಾಗ, ಅಂತಹವನು ಸತ್ಯ ಮತ್ತು ನ್ಯಾಯದಲ್ಲೇ ಸ್ಥಿರವಾಗಿ ನಿಲ್ಲಬಲ್ಲನೇ? ಇಂಥವನು ನಿಜಕ್ಕೂ ಸಾರ್ವಜನಿಕ ಸೊತ್ತಿನ ಸಂರಕ್ಷಣೆ ಮಾಡಬಲ್ಲನೇ? ಅವನು ಜನರ ಹಕ್ಕುಗಳಿಗೆ ಧಕ್ಕೆ ಮಾಡದೆ, ಧರ್ಮಬಾಹಿರವಾಗಿ ಸಂಪತ್ತನ್ನು ಕಬಳಿಸದೆ, ಜನರನ್ನು ತನ್ನ ಸ್ವೇಚ್ಛೆಗಳ ಗುಲಾಮರಾಗಿ ಮಾಡದೆ ಇರಬಲ್ಲನೇ? ಇಂತಹ ಒಬ್ಬ ವ್ಯಕ್ತಿ ಸ್ವತಃ ತಾನೂ ಸನ್ಮಾರ್ಗದಲ್ಲಿ ನಡೆಯಬಲ್ಲನು ಮತ್ತು ಇತರರನ್ನೂ ಸರಿಯಾದ ದಾರಿಯಲ್ಲಿ ನಡೆಸಬಲ್ಲನೆಂದು ನೀವು ನಿರೀಕ್ಷಿಸುವಿರಾ? ಇದೆಲ್ಲಾ ಖಂಡಿತ ಸಾಧ್ಯವಿಲ್ಲದ ವಿಷಯಗಳು, ಹೀಗಾಗಲು ಸಾಧ್ಯವಿಲ್ಲವೆಂದು ಮನುಷ್ಯ ಸಮಾಜದ ಸಹಸ್ರಾರು ವರ್ಷಗಳ ಇತಿಹಾಸವೇ ಸಾಕ್ಷಿ ನುಡಿಯುತ್ತಿದೆ. ದೇವಭಯವಾಗಲಿ ಪರಲೋಕದ ವಿಚಾರಣೆಯ ಪ್ರಜ್ಞೆಯಾಗಲಿ ಇಲ್ಲದ ಜನರು ಅಧಿಕಾರ ಪಡೆದಾಗ ಅವರು ಎಂತಹ ಅಕ್ರಮಿಗಳಾಗಿ, ವಂಚಕರಾಗಿ ಮತ್ತು ದುರ್ಮಾರ್ಗಗಾಮಿಗಳಾಗಿ ಮಾರ್ಪಡುತ್ತಾರೆ ಎಂಬುದನ್ನು ನೀವೇ ಇಂದು ಈ ಜಗತ್ತಿನಲ್ಲಿ ಕಣ್ಣಾರೆ ಕಾಣುತ್ತಿರುವಿರಿ.

ಆದ್ದರಿಂದ ಆಡಳಿತ ವ್ಯವಸ್ಥೆಯ ತಳಹದಿಯಲ್ಲೇ ಒಂದು ದೊಡ್ಡ ಸುಧಾರಣೆ ಆಗಬೇಕಾಗಿದೆ. ಅದೇನೆಂದರೆ, ಮಾನವನ ಮೇಲೆ ಮಾನವನ ಆಡಳಿತ ಕೊನೆಗೊಂಡು ದೇವನ ಆಡಳಿತ ಸ್ಥಾಪನೆಯಾಗಬೇಕು. ಈ ಆಡಳಿತವನ್ನು ನಡೆಸುವವರು ತಾವೇ ನಾಡಿನ ಒಡೆಯರೆನಿಸಿಕೊಳ್ಳುವ ಬದಲು ಅಲ್ಲಾಹನೇ ನೈಜ ಆಡಳಿತಗಾರನೆಂಬುದನ್ನು ಅಂಗೀಕರಿಸಿ ತಾವು ಆತನ ಅಧೀನರು ಹಾಗೂ ಪ್ರತಿನಿಧಿಗಳೆಂಬ ನೆಲೆಯಲ್ಲಿ ಕಾರ್ಯ ನಿರ್ವಹಿಸಬೇಕು. ಕೊನೆಗೊಮ್ಮೆ ತಾವು, ಗುಪ್ತ ಹಾಗೂ ವ್ಯಕ್ತವಾದ ಸಕಲ ವಿಷಯಗಳನ್ನೂ ಬಲ್ಲ ಆ ನೈಜ ಸಾಮ್ರಾಟನ ಮುಂದೆ ತಮ್ಮ ಆಡಳಿತದ ಬಗ್ಗೆ ಲೆಕ್ಕ ಒಪ್ಪಿಸಲಿಕ್ಕಿದೆ ಎಂಬ ಅರಿವಿನೊಂದಿಗೆ ಅವರು ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕು. ಅವರ ಸರಕಾರದ ಕಾನೂನು ನಿಯಮಗಳೆಲ್ಲಾ, ಸಕಲ ವಾಸ್ತವಿಕತೆಗಳ ಜ್ಞಾನ ಹೊಂದಿರುವ ಮತ್ತು ಜ್ಞಾನದ ಮೂಲ ಭಂಡಾರವಾಗಿರುವ ಅಲ್ಲಾಹನು ನೀಡಿದ ಮಾರ್ಗದರ್ಶನದಲ್ಲಿ ಅಧಿಷ್ಠಿತವಾಗಿರಬೇಕು. ಈ ಕಾನೂನುಗಳು ಮಾನವರ ಅಜ್ಞಾನ, ಸ್ವಾರ್ಥ, ಸಂಕುಚಿತತೆ ಅಥವಾ ದುರಾಗ್ರಹಗಳ ಹಸ್ತಕ್ಷೇಪದಿಂದ ವಿಕೃತವಾಗಿ ಬಿಡುವ ಸಾಧ್ಯತೆ ಇರಬಾರದು. ಆದ್ದರಿಂದ ಅವುಗಳನ್ನು ಪರಿವರ್ತಿಸುವ

ಅಥವಾ ತಿದ್ದುವ ಅಧಿಕಾರ ಯಾರಿಗೂ ಇರಬಾರದು.

ಇದುವೇ ಇಸ್ಲಾಮ್ ಧರ್ಮವು ಮಾಡಬಯಸುವ ಮೂಲಭೂತ ಸುಧಾರಣೆ. ಅಲ್ಲಾಹನನ್ನು ತಮ್ಮ ಪ್ರಭುವೆಂದು (ಕೇವಲ ಕಾಲ್ಪನಿಕ ಪ್ರಭುವಲ್ಲ, ವಾಸ್ತವಿಕ ಪ್ರಭುವೆಂದು) ಅಂಗೀಕರಿಸಿ, ಅವನು ತನ್ನ ಸಂದೇಶವಾಹಕರ ಮೂಲಕ ಕಳುಹಿಸಿರುವ ಕಾನೂನಿನ ಮೇಲೆ ವಿಶ್ವಾಸವಿರಿಸುವ ಜನರು ಆ ತಮ್ಮ ಪ್ರಭುವಿನ ಸಾಮ್ರಾಜ್ಯದಲ್ಲಿ ಆತನ ಕಾನೂನನ್ನು ಜಾರಿಗೊಳಿಸಲು ಕಂಕಣ ಬದ್ಧರಾಗಬೇಕು, ಅವನ ಪ್ರಜೆಗಳ ಪೈಕಿ ವಿದ್ರೋಹಿಗಳಾಗಿ ಬಿಟ್ಟಿರುವ ಮತ್ತು ತಾವೇ ಪ್ರಭುಗಳೆಂದು ಮೆರೆಯುತ್ತಿರುವ ಜನರ ಪ್ರಾಬಲ್ಯವನ್ನು ಮುರಿಯಬೇಕು ಮತ್ತು ಅಲ್ಲಾಹನ ದಾಸರನ್ನು ಅನ್ಯರ ದಾಸ್ಯದಿಂದ ಮುಕ್ತಗೊಳಿಸಬೇಕು ಎಂದು ಇಸ್ಲಾಮ್ ಧರ್ಮವು ಆಗ್ರಹಿಸುತ್ತದೆ.

ಇಸ್ಲಾಮಿನ ದೃಷ್ಟಿಯಲ್ಲಿ, ನೀವು ಅಲ್ಲಾಹನ ಕಾನೂನನ್ನು ಸರಿಯಾದ ಕಾನೂನೆಂದು ಅಂಗೀಕರಿಸಿ ಬಿಟ್ಟರೆ ಮಾತ್ರ ಸಾಲದು. ನೀವೆಲ್ಲೇ ಇದ್ದರೂ, ಯಾವ ಭೂಭಾಗದ ನಿವಾಸಿಗಳಾಗಿದ್ದರೂ ಅಲ್ಲಿ ಅಲ್ಲಾಹನ ದಾಸರ ಸುಧಾರಣೆಗಾಗಿ ಎದ್ದು ನಿಲ್ಲಬೇಕು, ಆಡಳಿತ ವ್ಯವಸ್ಥೆಯ ತಪ್ಪು ನಿಯಮಗಳನ್ನು ಕಿತ್ತೊಗೆದು ಸರಿಯಾದ ನಿಯಮಗಳನ್ನು ಜಾರಿಗೊಳಿಸಬೇಕು, ಅಧಿಕಾರ ಸೂತ್ರಗಳನ್ನು ದೇವಭಯವಿಲ್ಲದ, ಸ್ವೇಚ್ಛಾಚಾರಿಗಳ ಕಪಿ ಮುಷ್ಠಿಯಿಂದ ಕಿತ್ತುಕೊಂಡು ಜನಸಾಮಾನ್ಯರಿಗೆ ಮಾರ್ಗದರ್ಶನ ಮತ್ತು ನೇತೃತ್ವ ಒದಗಿಸುವ ಕರ್ತವ್ಯವನ್ನು ಸ್ವತಃ ಕೈಗೆತ್ತಿಕೊಂಡು ದೇವದತ್ತ ಕಾನೂನಿಗನುಸಾರವಾಗಿ, ಪರಲೋಕದ ವಿಚಾರಣೆಯ ಪ್ರಜ್ಞೆಯೊಂದಿಗೆ ಮತ್ತು ಅಲ್ಲಾಹನು ಎಲ್ಲ ಸುಪ್ತ ವಿಚಾರಗಳನ್ನೂ ಬಲ್ಲವನೆಂಬ ವಿಶ್ವಾಸ ಹಾಗೂ ಅರಿವಿನೊಂದಿಗೆ ಆಡಳಿತ ವ್ಯವಹಾರವನ್ನು ನಡೆಸಬೇಕು. ಇದು ನಿಮ್ಮ ಸಹಜ ಕರ್ತವ್ಯವಾಗಿದೆ ಎಂದು ಇಸ್ಲಾಮ್ ಧರ್ಮ ಹೇಳುತ್ತದೆ. ಈ ನಿಟ್ಟಿನಲ್ಲಿ ನಡೆಸುವ ಪ್ರಯತ್ನ ಹಾಗೂ ಹೋರಾಟವನ್ನೇ 'ಜಿಹಾದ್' ಎಂದು ಕರೆಯಲಾಗುತ್ತದೆ.

ಆದರೆ ಆಡಳಿತ ಮತ್ತು ಅಧಿಕಾರ ಸ್ಥಾನವು ಅದೆಂತಹ ಕಠಿಣ ಸತ್ವ ಪರೀಕ್ಷೆಯೆಂಬುದು ನಿಮಗೆಲ್ಲಾ ಗೊತ್ತು. ಅಧಿಕಾರ ಪ್ರಾಪ್ತವಾಗುವ ಕುರಿತು ಆಲೋಚಿಸು ವಾಗಲೇ ಮನುಷ್ಯನ ಮನಸ್ಸಿನಲ್ಲಿ ದುರಾಶೆಗಳ ಒಂದು ಬಿರುಗಾಳಿಯೇ ಎದ್ದು ಬಿಡುತ್ತದೆ. ಭೂಮಿಯ ಖಜಾನೆಗಳು ಮತ್ತು ಜನತೆಯ ಕೊರಳುಗಳು ತನ್ನ ಕೈಗೆ ಬಂದು ಬಿಟ್ಟೊಡನೆ ತಾನು ಮನ ಬಂದಂತೆ ಪ್ರಭುತ್ವ ನಡೆಸಬಹುದು

ಎಂದು ಮನುಷ್ಯನ ಸ್ವೇಚ್ಛೆಯು ಹಂಬಲಿಸಲಾರಂಭಿಸುತ್ತದೆ.. ನಿಜವಾಗಿ ಆಡಳಿತಾಧಿಕಾರಗಳನ್ನು ಸಂಪಾದಿಸಿಕೊಳ್ಳುವುದು ಹೆಚ್ಚು ಕಷ್ಟದ ಕೆಲಸವಲ್ಲ. ಆದರೆ ಅಧಿಕಾರ ಪ್ರಾಪ್ತವಾದ ಬಳಿಕ ತಾನು 'ದೇವರು' ಆಗಿ ಬಿಡುವುದನ್ನು ತಡೆದುಕೊಳ್ಳುವುದು ಮತ್ತು ದೇವನ ವಿನೀತ ದಾಸನಾಗಿ ಮುಂದುವರಿದು ಕಾರ್ಯ ನಿರ್ವಹಿಸುವುದು ಬಹಳ ಪ್ರಯಾಸದ ಕೆಲಸ. ಒಂದು ವೇಳೆ ಈ ಪ್ರಯಾಸಕರ ಕೆಲಸವನ್ನು ಮಾಡಲು ಸಾಧ್ಯವಿಲ್ಲವೆಂದಾದರೆ, ಒಬ್ಬ ಫಿರ್‌ಔನ್‌ನನ್ನು ಅಧಿಕಾರದಿಂದ ಕೆಳಗಿಳಿಸಿ ಅವನ ಸ್ಥಾನದಲ್ಲಿ ಸ್ವತಃ ನೀವೇ ಇನ್ನೊಬ್ಬ ಫಿರ್‌ಔನ್ ಆಗಿ ಬಿಡುವುದರಲ್ಲಿ ಇರುವ ಪ್ರಯೋಜನವಾದರೂ ಏನು?

ಆದ್ದರಿಂದಲೇ ಇಸ್ಲಾಮ್ ಧರ್ಮವು ಕಠಿಣ ಸತ್ವಪರೀಕ್ಷೆಯ ಈ ಕೆಲಸದೆಡೆಗೆ ನಿಮ್ಮನ್ನು ಕರೆಯುವುದಕ್ಕೆ ಮುಂಚೆ ನಿಮ್ಮನ್ನು ಈ ಕಾರ್ಯಕ್ಕಾಗಿ ಸಿದ್ಧಗೊಳಿಸುವುದು ಅತ್ಯವಶ್ಯಕವೆಂದು ಪರಿಗಣಿಸುತ್ತದೆ. ನಿಮ್ಮ ಮನಸ್ಸು ಸ್ವಾರ್ಥ ಮತ್ತು ಸ್ವೇಚ್ಛೆಗಳ ಪ್ರಭಾವದಿಂದ ಮುಕ್ತವಾಗುವ ತನಕ, ನಿಮ್ಮ ಹೋರಾಟವು ನಿಮ್ಮ ವೈಯಕ್ತಿಕ, ರಾಷ್ಟ್ರೀಯ ಅಥವಾ ಜನಾಂಗೀಯ ಸ್ವಾರ್ಥದ ಬದಲು ಕೇವಲ ಅಲ್ಲಾಹನ ಮೆಚ್ಚುಗೆ ಮತ್ತು ಜನತೆಯ ಹಿತಕ್ಕಾಗಿ ಮುಡಿಪಾಗುವಷ್ಟು ನಿಸ್ವಾರ್ಥತೆಯು ನಿಮ್ಮಲ್ಲಿ ಬೆಳೆಯುವ ತನಕ ಮತ್ತು ಅಧಿಕಾರ ಪಡೆದ ಬಳಿಕ ನೀವು ನಿಮ್ಮ ಸ್ವೇಚ್ಛೆಗಳನ್ನು ಅನುಸರಿಸುವ ಬದಲು ದೇವದತ್ತ ನಿಯಮಗಳನ್ನೇ ಅಚಲವಾಗಿ ಅನುಸರಿಸಲು ಬೇಕಾದಷ್ಟು ಸಾಮರ್ಥ್ಯವು ನಿಮ್ಮಲ್ಲಿ ಬೆಳೆಯುವ ತನಕ ನಿಮಗೆ ಸರಕಾರ ನಡೆಸುವ ಅಥವಾ ಜಗತ್ತಿನ ವಿರುದ್ಧ ಹೋರಾಟಕ್ಕಿಳಿಯುವ ಹಕ್ಕು ಪ್ರಾಪ್ತವಾಗುವುದಿಲ್ಲ.

ಕೇವಲ ನೀವು 'ಪವಿತ್ರ ಕಲಿಮ'ವನ್ನು ಪಠಿಸಿ ಇಸ್ಲಾಮಿನೊಳಗೆ ಪ್ರವೇಶಿಸಿದ್ದೀರೆಂದ ಮಾತ್ರಕ್ಕೆ ಇಸ್ಲಾಮ್ ಧರ್ಮವು ನಿಮಗೆ-ಜನತೆಯ ಮೇಲೆ ಮುಗಿ ಬೀಳಲು ಮತ್ತು ನೀವು ಕೂಡಾ ಅಲ್ಲಾಹ್ ಮತ್ತು ಪ್ರವಾದಿಯ ಹೆಸರಲ್ಲಿ ದೇವ ದ್ರೋಹಿಗಳು ಮತ್ತು ಅಕ್ರಮಿಗಳು ಮಾಡುವಂತಹ ಕೆಲಸಗಳನ್ನೇ ಮಾಡಲು ಹಕ್ಕು ನೀಡುವುದಿಲ್ಲ. ನಿಜವಾಗಿ ಇಸ್ಲಾಮ್, ಇಷ್ಟು ದೊಡ್ಡ ಹೊಣೆಗಾರಿಕೆಯ ಭಾರವನ್ನು ನಿಮ್ಮ ಮೇಲೆ ಹೊರಿಸುವ ಮುನ್ನ ಇದನ್ನು ಹೊತ್ತುಕೊಳ್ಳಲು ಬೇಕಾದ ಶಕ್ತಿಯನ್ನು ನಿಮ್ಮೊಳಗೆ ಬೆಳೆಸ ಬಯಸುತ್ತದೆ.

ಈ ನಮಾಝ್, ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್ ಎಂಬ

ಕರ್ಮಗಳು ಇರುವುದೇ ಈ ಮಹತ್ಕಾರ್ಯಕ್ಕಾಗಿ ಬೇಕಾದ ತರಬೇತಿಯನ್ನು ನೀಡಲಿಕ್ಕಾಗಿ. ಜಗತ್ತಿನ ಎಲ್ಲ ಸರಕಾರಗಳು ತಮ್ಮ ಪೊಲೀಸ್, ಸೈನ್ಯ ಮತ್ತು ನಾಗರಿಕ ಸೇವಾ ಕ್ಷೇತ್ರಗಳಿಗೆ ಸೇವಕರು ಅಥವಾ ಅಧಿಕಾರಿಗಳನ್ನು ನೇಮಿಸುವುದಕ್ಕೆ ಮುಂಚೆ ಅವರಿಗೆ ವಿಶೇಷ ತರಬೇತಿ ಕೊಡಿಸುತ್ತವೆ. ಅದೇ ರೀತಿ ಅಲ್ಲಾಹನ ಧರ್ಮವಾದ ಇಸ್ಲಾಮ್ ಕೂಡಾ ಯಾರನ್ನಾದರೂ ತನ್ನ ಸೇವೆಗೆ ನಿಯುಕ್ತಗೊಳಿಸುವ ಮುನ್ನ ಅವರಿಗೆ ಒಂದು ನಿರ್ದಿಷ್ಟ ರೀತಿಯ ತರಬೇತಿಯನ್ನು ನೀಡುತ್ತದೆ. ತರುವಾಯ ಅವರಿಂದ ಜಿಹಾದ್ ಮತ್ತು ದಿವ್ಯ ಸರಕಾರದ ವ್ಯವಸ್ಥಾಪನೆಯಂತಹ ಕೆಲಸಗಳನ್ನು ಮಾಡಿಸುತ್ತದೆ.

ಇಲ್ಲಿರುವ ವ್ಯತ್ಯಾಸವೇನೆಂದರೆ ಲೌಕಿಕ ಸರಕಾರಗಳು ತಮ್ಮ ಸೇವಕರಿಂದ ಮಾಡಿಸ ಬಯಸುವಂತಹ ಕೆಲಸಗಳಿಗೆ ನೈತಿಕತೆ, ಚಾರಿತ್ರ್ಯ, ಸೌಜನ್ಯ, ದೇವಭಯ ಮುಂತಾದ ಯಾವುದೇ ಗುಣದ ಅಗತ್ಯವಿರುವುದಿಲ್ಲ. ಅವುಗಳಿಗೆ ಕೇವಲ ಒಂದು ದಂಡಿನ ಅಗತ್ಯವಿರುತ್ತದೆ. ಆ ದಂಡಿನಲ್ಲಿರುವವರು ವ್ಯಭಿಚಾರಿಗಳು, ಕುಡುಕರು, ಅಪ್ರಾಮಾಣಿಕರು ಮತ್ತು ದುರಾತ್ಮರಾಗಿದ್ದರೂ ಸರಿಯೇ. ಆದರೆ ದೇವಧರ್ಮವು ತನ್ನ ಸೇವಕರಿಂದ ಮಾಡಿಸ ಬಯಸುವ ಕೆಲಸವು ಸಾದ್ಯಂತ ನೈತಿಕ ಸ್ವರೂಪದ್ದಾಗಿದೆ. ಆದ್ದರಿಂದಲೇ ಅದು ಅವರನ್ನು ಒಂದು ದಂಡಿನ ರೂಪದಲ್ಲಿ ನಿಯುಕ್ತಗೊಳಿಸುವ ಕಾರ್ಯಕ್ಕಿಂತ ಅವರನ್ನು ದೇವಭಯವುಳ್ಳ ಸಜ್ಜನರಾಗಿ ಮಾರ್ಪಡಿಸುವುದು ಹೆಚ್ಚು ಮಹತ್ವದ ಕೆಲಸವೆಂದು ಪರಿಗಣಿಸುತ್ತದೆ. ನಾಳೆ ಅವರು ತಾವು ದೇವಸಾಮ್ರಾಜ್ಯವನ್ನು ಸ್ಥಾಪಿಸುವೆವೆಂದು ಹೊರಟಾಗ ನಿಜಕ್ಕೂ ಅದನ್ನು ಮಾಡಿ ತೋರಿಸಲು ಅವರು ಶಕ್ತರಾಗಬೇಕು ಎಂದು ಅದು ಅಪೇಕ್ಷಿಸುತ್ತದೆ. ಅವರು ಹೋರಾಡುವುದಾದಲ್ಲಿ ಅದು ಸ್ವತಃ ತಮ್ಮ ಹಿತಕ್ಕಾಗಿ, ಸಂಪತ್ತಿಗಾಗಿ ಅಥವಾ ಪ್ರಸಿದ್ಧಿಗಾಗಿ ಆಗಿರದೆ ಅಪ್ಪಟವಾಗಿ ಅಲ್ಲಾಹನ ಮೆಚ್ಚುಗೆಗಳಿಸಲಿಕ್ಕಾಗಿ ಮತ್ತು ಅವನ ದಾಸರ ಕಲ್ಯಾಣಕ್ಕಾಗಿರಬೇಕು. ಅವರಿಗೆ ವಿಜಯ ಪ್ರಾಪ್ತವಾದರೆ ಅವರು ಅಹಂಕಾರ ಪಡುವ ಬದಲು ವಿನಯದೊಂದಿಗೆ ಭಯಭಕ್ತಿಯಿಂದ ಅಲ್ಲಾಹನ ಮುಂದೆ ತಲೆಬಾಗಬೇಕು. ಅವರು ಆಡಳಿತಗಾರರಾದರೆ ಜನರನ್ನು ತಮ್ಮ ಗುಲಾಮರಾಗಿ ಮಾಡುವ ಬದಲು ಸ್ವತಃ ತಾವೂ ಅಲ್ಲಾಹನ ದಾಸರಾಗಿದ್ದು, ಜನರು ಕೂಡಾ ಅಲ್ಲಾಹನ ಹೊರತು ಇತರರ ದಾಸ್ಯಕ್ಕೆ ಒಳಗಾಗದಂತೆ ನೋಡಿಕೊಳ್ಳಬೇಕು. ಭೂಮಿಯ ಖಜಾನೆಗಳು ಅವರ ನಿಯಂತ್ರಣಕ್ಕೆ ಬಂದಾಗ

ಅವರು ಸ್ವತಃ ತಮ್ಮ ಕುಟುಂಬದ ಹಾಗೂ ತಮ್ಮ ಕೋಮಿನವರ ಕಿಸೆಗಳನ್ನು ತುಂಬುವುದರಲ್ಲಿ ನಿರತರಾಗುವ ಬದಲು ದೇವದತ್ತ ಸಂಪತ್ತನ್ನು ದೇವನ ದಾಸರ ನಡುವೆ ನ್ಯಾಯಸಮ್ಮತ ರೀತಿಯಲ್ಲಿ ವಿತರಣೆ ಮಾಡಬೇಕು ಮತ್ತು ಕರ್ತವ್ಯನಿಷ್ಠ ದಾಸರಂತೆ, ದೇವನ ಸರ್ವವೀಕ್ಷಕ ಕಣ್ಣುಗಳು ನಮ್ಮನ್ನು ಸದಾ ವೀಕ್ಷಿಸುತ್ತಿವೆ ಮತ್ತು ಆತನಿಗೆ ನಾವು ಒಂದೊಂದು ಪೈಸೆಯ ಬಗ್ಗೆ ಲೆಕ್ಕ ಸಮರ್ಪಿಸಲಿಕ್ಕಿದೆ ಎಂಬ ಪ್ರಜ್ಞೆಯೊಂದಿಗೆ ಕರ್ತವ್ಯ ನಿರ್ವಹಿಸಬೇಕು ಎಂದು ಅಪೇಕ್ಷಿಸುವ ಇಸ್ಲಾಮ್ ಧರ್ಮವು ತನ್ನ ಸೇವಕರಲ್ಲಿ ಇಂತಹ ಸಾಮರ್ಥ್ಯಗಳನ್ನು ಬೆಳೆಸಬಯಸುತ್ತದೆ. ಈ ಸಾಮರ್ಥ್ಯಗಳು ಅವರಲ್ಲಿ ಬೆಳೆಯಲಿಕ್ಕಾಗಿ ಅವರಿಗೆ ತರಬೇತಿ ನೀಡಲು ಪ್ರಸ್ತುತ ಆರಾಧನಾ ಕರ್ಮಗಳಿಗಿಂತ ಪರಿಣಾಮಕಾರಿಯಾದ ವಿಧಾನ ಬೇರಿಲ್ಲ. ಇನ್ನು ಈ ವಿಧಾನದಿಂದ ಇಸ್ಲಾಮ್ ಧರ್ಮವು ತನ್ನ ಸೇವಕರಿಗೆ ತರಬೇತಿ ಕೊಟ್ಟು ಅವರನ್ನು ಸಿದ್ಧಗೊಳಿಸಿದ ಬಳಿಕ ಅವರೊಡನೆ- ಈಗ ನೀವು - ಈ ಭೂಮಿಯ ಮೇಲೆ ಅಲ್ಲಾಹನ ಅತ್ಯಂತ ಶಿಷ್ಟ ದಾಸರಾಗಿರುವಿರಿ. ಆದ್ದರಿಂದ ನೀವೀಗ ಮುಂದಡಿ ಇಡಿರಿ. ಜಗತ್ತಿನಲ್ಲಿರುವ ಎಲ್ಲ ದೇವದ್ರೋಹಿಗಳ ಕೈಗಳಿಂದ ಅಧಿಕಾರ ಕಿತ್ತುಕೊಂಡು, ಖಿಲಾಫತ್‌ನ(ದೇವ ಪ್ರಾತಿನಿಧ್ಯ) ಕರ್ತವ್ಯ ಮತ್ತು ಅಧಿಕಾರಗಳನ್ನು ಕೈಗೆತ್ತಿಕೊಳ್ಳಿರಿ- ಎಂದು ಹೇಳುತ್ತದೆ.

ಎಲ್ಲಿ ಪೊಲೀಸ್, ಸೇನೆ, ನ್ಯಾಯಾಲಯ, ಜೈಲು, ಕಂದಾಯ ಇಲಾಖೆ ಮತ್ತಿತರ ಎಲ್ಲ ಸರಕಾರಿ ಇಲಾಖೆಗಳು ಸಂಪೂರ್ಣವಾಗಿ, ಸದಾ ಅಲ್ಲಾಹನಿಗೆ ಭಯಪಡುತ್ತಾ ಇರುವ ಮತ್ತು ಪರಲೋಕದ ವಿಚಾರಣೆಯ ಬಗ್ಗೆ ಸದಾ ಪ್ರಜ್ಞಾವಂತರಾಗಿರುವ ಅಧಿಕಾರಿಗಳು ಮತ್ತು ನೌಕರರ ಕೈಯಲ್ಲಿರುವವೋ, ಎಲ್ಲಿ ಸರಕಾರದ ಎಲ್ಲ ಕಾನೂನು-ನಿಯಮಗಳು ಯಾವುದೇ ಅನ್ಯಾಯ ಅಥವಾ ದೋಷಕ್ಕೆ ಎಡೆಯೇ ಇಲ್ಲದ ದಿವ್ಯಮಾರ್ಗದರ್ಶನದಲ್ಲಿ ಅಧಿಷ್ಠಿತವಾಗಿರುವವೋ, ಎಲ್ಲಿ ಕೆಡುಕಿನ ಎಲ್ಲ ಪ್ರಕಾರಗಳನ್ನೂ ಮೂಲದಲ್ಲೇ ಹತ್ತಿಕ್ಕಿ ಬಿಡಲಾಗುತ್ತದೋ ಮತ್ತು ಎಲ್ಲಿ ಸರಕಾರವು ತನ್ನೆಲ್ಲ ಶಕ್ತಿ ಮತ್ತು ಸಂಪನ್ಮೂಲಗಳನ್ನು ತೊಡಗಿಸಿ ಒಳಿತನ್ನು ಮತ್ತು ಅದರ ಸಕಲ ಪ್ರಕಾರಗಳನ್ನು ಪ್ರೋತ್ಸಾಹಿಸಲು ಕಂಕಣ ಬದ್ಧವಾಗಿರುವುದೋ ಅಲ್ಲಿ ಜನತೆಯು ಎಷ್ಟೊಂದು ಸುಖ ಮತ್ತು ಸಂಪನ್ನತೆಯನ್ನು ಪಡೆಯಬಹುದೆಂದು ನೀವು ಸುಲಭವಾಗಿ ಊಹಿಸ ಬಹುದು.

ಇದೇ ರೀತಿ ಇಂತಹ ಒಂದು ಸರಕಾರವು ಕೆಲವು ಕಾಲ ಕಾರ್ಯನಿರತವಾಗಿ ಜನರ ಗುಣ-ಸ್ವಭಾವಗಳನ್ನೆಲ್ಲಾ ಸುಧಾರಿಸಿದಾಗ, ಅದು ಅಕ್ರಮ ಸಂಪಾದನೆ, ಅನ್ಯಾಯ, ವ್ಯಭಿಚಾರ, ಅಶ್ಲೀಲತೆ ಮತ್ತು ಅನೈತಿಕತೆಯ ಎಲ್ಲ ದ್ವಾರಗಳನ್ನು ಮುಚ್ಚಿ ಬಿಟ್ಟಾಗ, ಶಿಕ್ಷಣ ಮತ್ತು ತರಬೇತಿಯ ದುಷ್ಟ ಪದ್ಧತಿಗಳನ್ನು ತೊಡೆದು ಹಾಕಿ ಸರಿಯಾದ ಶಿಕ್ಷಣ ಮತ್ತು ತರಬೇತಿ ವ್ಯವಸ್ಥೆಯ ಮೂಲಕ ಜನರ ಆಚಾರ ವಿಚಾರಗಳನ್ನು ಸರಿಪಡಿಸಿದಾಗ ಮತ್ತು ಈ ಸರಕಾರದ ಆಶ್ರಯದಲ್ಲಿ ನ್ಯಾಯ, ಶಾಂತಿ, ಸೌಹಾರ್ದ ಮತ್ತು ಸೌಜನ್ಯದ ಶುಭ್ರ, ನಿರ್ಮಲ ವಾತಾವರಣದಲ್ಲಿ ಜೀವನ ಸಾಗಿಸಲು ಜನತೆಗೆ ಅವಕಾಶ ಸಿಕ್ಕಾಗ - ಶತಮಾನಗಳಿಂದ ದುಷ್ಟ, ಭ್ರಷ್ಟ ಹಾಗೂ ದೇವಭಯವಿಲ್ಲದ ಜನರ ನಾಯಕತ್ವದಡಿಯಲ್ಲಿ ಬಾಳಿದ್ದರಿಂದಾಗಿ ಕುರುಡಾಗಿ ಹೋಗಿದ್ದ ಕಣ್ಣುಗಳು ಕಾಲಕ್ರಮೇಣ ತಾವಾಗಿಯೇ ಸತ್ಯವನ್ನು ಕಾಣಲು ಮತ್ತು ಗುರುತಿಸಲು ಶಕ್ತವಾಗುವವು. ಶತಮಾನಗಳಿಂದ ಅನೈತಿಕ ವಾತಾವರಣದಲ್ಲಿ ಸಿಲುಕಿಕೊಂಡ ಕಾರಣ ತುಕ್ಕು ಹಿಡಿದಿದ್ದ ಮನಸ್ಸುಗಳು ಕ್ರಮೇಣ ಕನ್ನಡಿಯಂತೆ ಶುಭ್ರವಾಗಲಾರಂಭಿಸುವವು ಮತ್ತು ಸತ್ಯದ ಪ್ರತಿಬಿಂಬವನ್ನು ಸ್ವೀಕರಿಸುವ ಸಾಮರ್ಥ್ಯವು ಅವುಗಳಲ್ಲಿ ಬೆಳೆಯತೊಡಗುವುದು. ಆಗ ಜನರಿಗೆ, ಅಲ್ಲಾಹನೇ ತಮ್ಮ ನೈಜ ಆರಾಧ್ಯನಾಗಿದ್ದು ಅವನ ಹೊರತು ಬೇರಾರೂ ಆರಾಧನೆ ಮತ್ತು ದಾಸ್ಯಕ್ಕೆ ಅರ್ಹರಲ್ಲ ಎಂಬ ಹಾಗೂ ಇಂತಹ ಶ್ರೇಷ್ಠ ನಿಯಮಗಳು ಮತ್ತು ಸದ್‌ವ್ಯವಸ್ಥೆಯು ಯಾವ ಪ್ರವಾದಿಗಳ ಮೂಲಕ ಮಾನವಕುಲಕ್ಕೆ ಪ್ರಾಪ್ತವಾದವೋ ಅವರು ನಿಜಕ್ಕೂ ಸತ್ಯವಂತರಾಗಿದ್ದರು ಎಂಬ ಸರಳವಾದ ವಾಸ್ತವಿಕತೆಯನ್ನು ಗ್ರಹಿಸಲು ಮತ್ತು ಅಂಗೀಕರಿಸಲು ಸ್ವಲ್ಪವೂ ಪ್ರಯಾಸವಾಗದು. ಇಂದು ಯಾವ ವಿಷಯಗಳನ್ನು ಜನರಿಗೆ ಮನವರಿಕೆ ಮಾಡಿಸುವುದು ಅತ್ಯಂತ ಪ್ರಯಾಸಕರವೆನಿಸುತ್ತದೋ ಅದೇ ವಿಷಯಗಳು ಆಗ ಜನರಿಗೆ ತನ್ನಿಂತಾನೇ ಅರ್ಥವಾಗಲಾರಂಭಿಸುವವು. ಇಂದು ಭಾಷಣ ಮತ್ತು ಪುಸ್ತಕಗಳ ಮೂಲಕ ವಿವರಿಸಲು ಸಾಧ್ಯವಾಗದಂತಹ ಅನೇಕ ವಿಚಾರಗಳು ಆಗ ಜನರಿಗೆ ಯಾವ ತೊಡಕೂ ಇಲ್ಲದೆ ಬಹಳ ಸುಲಭದಲ್ಲೇ ಅರ್ಥವಾಗಿ ಬಿಡುವವು.

ಹೂವು ಮತ್ತು ಮುಳ್ಳುಗಳ ನಡುವಣ ವ್ಯತ್ಯಾಸ ತಿಳಿದ ಬಳಿಕ ಹೂವನ್ನು ಆಯ್ದುಕೊಳ್ಳುವುದು ಸುಲಭವೂ ಮುಳ್ಳನ್ನು ಆಯ್ದುಕೊಳ್ಳುವುದು ಕಷ್ಟವೂ ಆಗಿ

ಬಿಡುತ್ತದೆ. ಹಾಗೆಯೇ ಮಾನವ ನಿರ್ಮಿತ ನಿಯಮಗಳ ಪ್ರಕಾರ ಈ ಜಗತ್ತಿನ ವ್ಯವಸ್ಥೆಯನ್ನು ನಡೆಸಿದರೆ ಎಂತಹ ಅವಸ್ಥೆ ಉದ್ಭವಿಸುತ್ತದೆ ಮತ್ತು ಈ ಲೋಕದ ವ್ಯವಹಾರಗಳನ್ನೆಲ್ಲಾ ದೇವ ನಿರ್ದೇಶಿತ ವಿಧಾನದಿಂದ ನಡೆಸಿದಾಗ ಎಂತಹ ಸುವ್ಯವಸ್ಥೆ ನೆಲೆಸುತ್ತದೆ ಎಂಬ ವ್ಯತ್ಯಾಸವನ್ನು ಜನರು ಕಣ್ಣಾರೆ ಕಂಡುಕೊಂಡಾಗ ಅವರ ಪಾಲಿಗೆ, ದೇವನು ಏಕೈಕ ನೆಂಬುದನ್ನೂ ಅವನ ಸಂದೇಶವಾಹಕರು ಸತ್ಯವಂತರು ಹಾಗೂ ಅನುಸರಣಾರ್ಹರೆಂಬುದನ್ನು ನಂಬುವುದು ಸುಲಭವಾಗುತ್ತದೆ ಮತ್ತು ಈ ವಾಸ್ತವಿಕತೆಯನ್ನು ತಿರಸ್ಕರಿಸುವುದು ಕಷ್ಟವಾಗಿ ಬಿಡುತ್ತದೆ. ಆಗ ಜನರಿಗೆ, ಇಸ್ಲಾಮ್ ಸತ್ಯವೆಂಬುದನ್ನು ನಿರಾಕರಿಸಲು ಹಾಗೂ ದೇವ ಧಿಕ್ಕಾರ ಹಾಗೂ ಬಹುದೇವಾರಾಧನೆಯಲ್ಲಿ ಮುಂದುವರಿಯಲು ಭಾರೀ ಹಠಮಾರಿತನ ಬೇಕಾಗುತ್ತದೆ. ಈ ಮಟ್ಟದ ಹಠಮಾರಿತನವಂತೂ ಸಾವಿರ ಮಂದಿಯ ಪೈಕಿ ಹೆಚ್ಚೆಂದರೆ ಐದಾರು ಮಂದಿಯಲ್ಲಿ ಮಾತ್ರ ಕಾಣ ಸಿಗಬಹುದು.

ಬಂಧುಗಳೇ! ಈ ನಮಾಝ್, ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ಗಳನ್ನು ಯಾವ ಉದ್ದೇಶದಿಂದ ಕಡ್ಡಾಯಗೊಳಿಸಲಾಗಿದೆ ಎಂಬುದು ಈಗಾಗಲೇ ನಿಮಗೆ ಚೆನ್ನಾಗಿ ಮನವರಿಕೆಯಾಗಿರಬಹುದು. ಈವರೆಗೆ ನಿಮ್ಮನ್ನು, ಈ ಆರಾಧನಾ ಕರ್ಮಗಳೆಲ್ಲಾ ಕೇವಲ ಪೂಜೆ ಪುರಸ್ಕಾರಗಳಂತಹ ಕಟ್ಟಳೆಗಳು ಮಾತ್ರ ಎಂಬ ತಪ್ಪು ತಿಳುವಳಿಕೆಗೆ ಒಳಪಡಿಸಲಾಗಿತ್ತು. ವಾಸ್ತವದಲ್ಲಿ ಇವುಗಳ ಮೂಲಕ ನಿಮ್ಮನ್ನು ಒಂದು ಮಹಾನ್ ಸೇವೆಗೆ ಸಿದ್ಧಗೊಳಿಸಲಾಗುತ್ತಿದೆ ಎಂಬುದನ್ನು ನಿಮ್ಮಲ್ಲನೇಕರಿಗೆ ಯಾರೂ ತಿಳಿಸಿರಲಾರರು. ಆದ್ದರಿಂದಲೇ ನೀವು ಬಹುಕಾಲದಿಂದ ಯಾವುದೇ ಉದ್ದೇಶದ ಪ್ರಜ್ಞೆ ಇಲ್ಲದೆಯೇ ಈ ಕಡ್ಡಾಯ ಕರ್ಮಗಳನ್ನು ನಿರ್ವಹಿಸುತ್ತಲಿದ್ದೀರಿ. ಯಾವ ಕಾರ್ಯಕ್ಕೆ ನಿಮ್ಮನ್ನು ಸಿದ್ಧಗೊಳಿಸಲಿಕ್ಕಾಗಿ ಇವುಗಳನ್ನು ಕಡ್ಡಾಯಗೊಳಿಸಲಾಗಿದೆಯೋ ಅದರ ಆಲೋಚನೆಯೇ ನಿಮ್ಮ ಮನಸ್ಸಿನಲ್ಲಿ ಸುಳಿಯಲಿಲ್ಲ. ಇದೀಗ ನಾನು ನಿಮ್ಮೊಡನೆ ಹೇಳುತ್ತಿದ್ದೇನೆ; ಯಾವ ಮನಸ್ಸಿನಲ್ಲಿ ಜಿಹಾದ್‌ನ ಸಂಕಲ್ಪವಿಲ್ಲವೋ ಮತ್ತು ಯಾರ ಮುಂದೆ ಜಿಹಾದ್‌ನ ಗುರಿ ಇಲ್ಲವೋ ಅವರ ಆರಾಧನೆಗಳೆಲ್ಲಾ ಅರ್ಥಹೀನವಾಗಿವೆ. ಇಂತಹ ಅರ್ಥ ಹೀನ ಆರಾಧನೆಗಳ ಮೂಲಕ ದೇವನ ಸಾಮೀಪ್ಯ ಪ್ರಾಪ್ತವಾಗುತ್ತದೆಂದು ನೀವು ಭ್ರಮಿಸಿಕೊಂಡಿದ್ದರೆ, ನಿಜಕ್ಕೂ ಇವು ನಿಮ್ಮನ್ನು ದೇವನಿಗೆ ಎಷ್ಟು ಸಮೀಪಗೊಳಿಸಿವೆ ಎಂಬುಧನ್ನು ಅವನ ಬಳಿಗೆ ಹೋದಾಗ ಸ್ವತಃ ನೀವೇ ಕಂಡುಕೊಳ್ಳುವಿರಿ.

# ಜಿಹಾದ್‌ನ ಮಹತ್ವ

ಮುಸ್ಲಿಮ್ ಬಂಧುಗಳೇ,

ಈ ಹಿಂದೆ ನಾನೊಮ್ಮೆ ನಿಮಗೆ ದೀನ್, ಶರೀಅತ್ ಮತ್ತು ಇಬಾದತ್ ಎಂಬ ಪದಗಳ ಅರ್ಥವನ್ನು ತಿಳಿಸಿದ್ದೆ. ಈಗ ನೀವು ಆ ಪಾಠವನ್ನು ಮತ್ತೊಮ್ಮೆ ನೆನಪಿಗೆ ತಂದುಕೊಳ್ಳಿರಿ.

'ದೀನ್' ಎಂದರೆ ಆಜ್ಞಾಪಾಲನೆ.

'ಶರೀಅತ್' ಎಂದರೆ ಕಾನೂನು.

'ಇಬಾದತ್' ಎಂದರೆ ದಾಸ್ಯ.

ನೀವು ಯಾರದಾದರೂ ಆಜ್ಞಾಪಾಲಕರಾಗಿ ಅವನನ್ನು ನಿಮ್ಮ ಆಡಳಿತಗಾರ ಎಂದು ಅಂಗೀಕರಿಸಿದರೆ ನೀವು ಆ ಮೂಲಕ ಆತನ ದೀನ್ ಅರ್ಥಾತ್ ಧರ್ಮವನ್ನು ಸ್ವೀಕರಿಸಿದಂತಾಗುವುದು. ಆ ಬಳಿಕ ಅವನು ನಿಮ್ಮ ಆಡಳಿತಗಾರನೂ ನೀವು ಅವನ ಪ್ರಜೆಯೂ ಆಗಿ ಬಿಟ್ಟಾಗ ಅವನು ಹೊರಡಿಸುವ ಆದೇಶಗಳು ಮತ್ತು ಅವನು ನಿಶ್ಚಯಿಸುವ ಕಾನೂನು-ನಿಯಮಗಳು ನಿಮ್ಮ ಪಾಲಿಗೆ ಶರೀಅತ್ ಆಗಿ ಬಿಡುವವು. ಆ ಬಳಿಕ ನೀವು ಆತನ ಆಜ್ಞಾಪಾಲನೆ ಮಾಡುತ್ತಾ ಆತನ ಶರೀಅತ್‌ನ ಪ್ರಕಾರ ಜೀವನ ಸಾಗಿಸಲಾರಂಭಿಸಿದರೆ, ಅವನು ಕೇಳಿದ್ದನ್ನೆಲ್ಲಾ ಅವನಿಗೆ ಕೊಡಲಾರಂಭಿಸಿದರೆ, ಅವನ ಆದೇಶಗಳನ್ನು ಪಾಲಿಸಲಾರಂಭಿಸಿದರೆ, ಯಾವುದರಿಂದ ಅವನು ನಿಮ್ಮನ್ನು ತಡೆಯುತ್ತಾನೋ ಅದರಿಂದ ನೀವು ದೂರವಿದ್ದರೆ, ಯಾವ ಪರಿಧಿಯೊಳಗೆ ಸಕ್ರಿಯರಾಗಿರಲು ಅವನು ನಿಮಗೆ ಅನುಮತಿಸುವನೋ ಆ ಪರಿಧಿಯೊಳಗೇ ನೀವು ಇದ್ದು ಬಿಟ್ಟರೆ, ನಿಮ್ಮ ಪರಸ್ಪರ ಸಂಬಂಧಗಳು, ವ್ಯವಹಾರಗಳು, ವಿವಾದಗಳು, ಮೊಕದ್ದಮೆಗಳು ಇತ್ಯಾದಿ ವಿಷಯಗಳಲ್ಲೆಲ್ಲಾ ನೀವು ಅವನ ನಿರ್ದೇಶಗಳನ್ನೇ ಅನುಸರಿಸಲಾರಂಭಿಸಿದರೆ ಮತ್ತು ಈ ಎಲ್ಲ ವಿಷಯಗಳಲ್ಲಿ ಅವನ ತೀರ್ಮಾನಗಳಿಗೆ ತಲೆಬಾಗಿದರೆ ನಿಮ್ಮ ಈ ವರ್ತನೆಯು ಇಬಾದತ್ ಅಥವಾ ದಾಸ್ಯ-ಆರಾಧನೆ ಎನಿಸಿಕೊಳ್ಳುತ್ತದೆ.

ಈ ವ್ಯಾಖ್ಯಾನದಿಂದ ಸ್ಪಷ್ಟವಾಗುವಂತೆ, 'ದೀನ್' ಎಂಬುದು ವಾಸ್ತವದಲ್ಲಿ ಆಡಳಿತ ವ್ಯವಸ್ಥೆ ಅಥವಾ ಸರಕಾರದ ಹೆಸರಾಗಿದೆ. 'ಶರೀಅತ್' ಎಂಬುದು ಆ

ಸರಕಾರದ ಕಾನೂನಾಗಿದೆ. 'ಇಬಾದತ್' ಎಂಬುದು ಆ ಕಾನೂನು-ನಿಯಮಗಳ ಪಾಲನೆಯಾಗಿದೆ. ನೀವು ಯಾರನ್ನಾದರೂ ನಿಮ್ಮ ಆಡಳಿತಗಾರನೆಂದು ಅಂಗೀಕರಿಸಿ ಅವನಿಗೆ ಅಧೀನ ರಾಗುವುದನ್ನು ಸಮ್ಮತಿಸಿದರೆ ಆ ಮೂಲಕ ನಿಜವಾಗಿ ನೀವು ಅವನ ದೀನ್ ಅಥವಾ ಧರ್ಮವನ್ನು ಪ್ರವೇಶಿಸಿದಂತಾಗುವುದು. ಒಂದು ವೇಳೆ ಆ ನಿಮ್ಮ ಆಡಳಿತಗಾರನು ಅಲ್ಲಾಹನೇ ಆಗಿದ್ದರೆ ನೀವು ಅಲ್ಲಾಹನ ದೀನ್‌ನೊಳಗೆ ಪ್ರವೇಶಿಸಿದಂತಾಯಿತು. ಆತ ಯಾರಾದರೊಬ್ಬ ದೊರೆಯಾಗಿದ್ದರೆ ನೀವು ದೊರೆಯ ಧರ್ಮವನ್ನು ಪ್ರವೇಶಿಸಿದಂತಾಯಿತು. ಅದೊಂದು ನಿರ್ದಿಷ್ಟ ಜನಾಂಗವಾಗಿದ್ದರೆ ನೀವು ಆ ಜನಾಂಗದ ಧರ್ಮವನ್ನು ಪ್ರವೇಶಿಸಿದಂತಾಯಿತು. ಅದು ನಿಮ್ಮ ಸ್ವಂತ ಜನಾಂಗವಾಗಿದ್ದರೆ ಅಥವಾ ನಿಮ್ಮದೇ ದೇಶದ ಪ್ರಜಾಸತ್ತಾತ್ಮಕ ಬಹುಸಂಖ್ಯೆಯಾಗಿದ್ದರೆ ನೀವು ಬಹುಸಂಖ್ಯಾತರ ಧರ್ಮವನ್ನು ಪ್ರವೇಶಿಸಿದಂತಾಯಿತು. ಒಟ್ಟಿನಲ್ಲಿ ಯಾರ ಆಜ್ಞಾಪಾಲನೆಯ ನೊಗವು ನಿಮ್ಮ ಕೊರಳಲ್ಲಿದೆಯೋ ನೀವು ಯಥಾರ್ಥದಲ್ಲಿ ಅವರ ಧರ್ಮದಲ್ಲೇ ಇರುವಿರೆಂದಾಯಿತು ಮತ್ತು ಯಾರ ಕಾನೂನುಗಳನ್ನು ನೀವು ಅನುಸರಿಸುತ್ತಿರುವಿರೋ ಯಥಾರ್ಥದಲ್ಲಿ ನೀವು ಅವರದೇ ಇಬಾದತ್ ಮಾಡುತ್ತಿರುವಿರಿ ಎಂದಾಯಿತು.

ಇಷ್ಟನ್ನು ಮನವರಿಕೆ ಮಾಡಿಕೊಂಡ ಬಳಿಕ, ಒಬ್ಬ ಮನುಷ್ಯನಿಗೆ ಏಕಕಾಲದಲ್ಲಿ ಎರಡು 'ದೀನ್'ಗಳಿರಲು ಸಾಧ್ಯವಿಲ್ಲ ಎಂಬ ವಾಸ್ತವಿಕತೆಯು ಯಾವ ತೊಡಕೂ ಇಲ್ಲದೆ ನಿಮಗೆ ಅರ್ಥವಾದೀತು. ಏಕೆಂದರೆ ವಿಭಿನ್ನ ಆಡಳಿತಗಾರರ ಪೈಕಿ ನಿಮಗಂತೂ ಯಾರಾದರೂ ಒಬ್ಬನ ಆಜ್ಞಾಪಾಲನೆಯನ್ನು ಮಾತ್ರ ಮಾಡಲು ಸಾಧ್ಯ. ವಿಭಿನ್ನ ಕಾನೂನುಗಳ ಪೈಕಿ ಯಾವುದಾದರೂ ಒಂದು ಕಾನೂನು ಮಾತ್ರ ನಿಮ್ಮ ಜೀವನದ ನಿಯಮವಾಗಲು ಸಾಧ್ಯ. ಹಾಗೆಯೇ ವಿಭಿನ್ನ ಆರಾಧ್ಯರುಗಳ ಪೈಕಿ ಯಾರಾದರೂ ಒಬ್ಬರ ಆರಾಧನೆಯನ್ನು ಮಾತ್ರ ಮಾಡಲು ನಿಮಗೆ ಸಾಧ್ಯ. ಈಗ ನಿಮಗೆ ಒಂದು ಉಪಾಯ ಹೊಳೆಯಬಹುದು. ನಾವು ನಂಬಿಕೆಯ ಮಟ್ಟಿಗೆ ಒಬ್ಬನನ್ನು ಆಡಳಿತಗಾರನೆಂದು ನಂಬಿ ಪ್ರಾಯೋಗಿಕವಾಗಿ ಇನ್ನೊಬ್ಬನ ಆಜ್ಞಾಪಾಲನೆ ಮಾಡಬಹುದು. ಪೂಜೆ ಪುರಸ್ಕಾರಗಳನ್ನು ಒಬ್ಬನಿಗೆ ಸಲ್ಲಿಸಿ ಇನ್ನೊಬ್ಬನ ದಾಸ್ಯ-ಆರಾಧನೆ ಮಾಡಬಹುದು. ನಮ್ಮ ಮನದಾಳದಲ್ಲಿ ಒಂದು ಕಾನೂನಿನ ಮೇಲೆ ವಿಶ್ವಾಸವಿರಿಸಿ ನಮ್ಮ ನಿತ್ಯ ಜೀವನದ ಎಲ್ಲ ವ್ಯವಹಾರಗಳನ್ನು ಇನ್ನೊಂದು

ಕಾನೂನಿನ ಪ್ರಕಾರ ನಡೆಸಬಹುದು ಎಂಬುದೇ ಆ ಉಪಾಯ. ಖಂಡಿತವಾಗಿಯೂ ಹೀಗೆಲ್ಲಾ ಮಾಡಬಹುದು ಮಾತ್ರವಲ್ಲ, ನಿಜಕ್ಕೂ ಹೀಗೆಯೇ ಮಾಡಲಾಗುತ್ತಿದೆ. ಆದರೆ ಹೀಗೆ ಮಾಡುವುದು ಶಿರ್ಕ್(ಬಹುದೇವ ದಾಸ್ಯ) ಆಗಿದೆ ಮತ್ತು ಈ ಶಿರ್ಕ್ ಸಾದ್ಯಂತ ಸುಳ್ಳು ಹಾಗೂ ಮಿಥ್ಯವಾಗಿದೆ. ವಾಸ್ತವದಲ್ಲಂತೂ ನೀವು ಪ್ರಾಯೋಗಿಕವಾಗಿ ಯಾರ ಆಜ್ಞಾಪಾಲನೆ ಮಾಡುತ್ತಿರುವಿರೋ ಅವರ 'ದೀನ್'ನಲ್ಲೇ ಇರುವಿರಿ. ಹೀಗಿರುತ್ತಾ ನೀವು ಯಾರ ಆಜ್ಞಾಪಾಲನೆ ಮಾಡುತ್ತಿಲ್ಲವೋ ಅವನನ್ನು ನಿಮ್ಮ ಆಡಳಿತಗಾರನೆಂದು ಮತ್ತು ಅವನ ದೀನ್ ಅಥವಾ ಧರ್ಮವನ್ನು ನಿಮ್ಮ ದೀನ್ ಎಂದು ಹೇಳುವುದು ಸುಳ್ಳಲ್ಲದೆ ಮತ್ತೇನು? ಒಂದು ವೇಳೆ ನೀವು ಬಾಯಲ್ಲಿ ಹಾಗೆ ಹೇಳಿಕೊಳ್ಳುತ್ತಲಿದ್ದರೂ ಅಥವಾ ಮನಸ್ಸಿನಲ್ಲಿ ಹಾಗೆ ಭಾವಿಸಿ ಕೊಂಡಿದ್ದರೂ ಅದರಿಂದ ಪ್ರಯೋಜನವೇನು? ಮತ್ತು ಆದರ ಪರಿಣಾಮವೇನು?

ನಿಮ್ಮ ಜೀವನದ ವ್ಯವಹಾರಗಳೆಲ್ಲವೂ ಅವನ ಶರೀಅತ್‌ನ ಪರಿಧಿಯ ಹೊರಗಿದ್ದು ಬೇರೆ ಯಾರದೋ ಶರೀಅತ್‌ನ ಪ್ರಕಾರ ನಡೆಯುತ್ತಿರುವಾಗ ನಾವು ಅವನ ಶರೀಅತ್‌ನ ಮೇಲೆ ವಿಶ್ವಾಸವಿರಿಸಿದ್ದೇವೆ ಎಂಬ ನಿಮ್ಮ ಹೇಳಿಕೆ ತೀರಾ ಅರ್ಥಹೀನವೆನಿಸುತ್ತದೆ. ನೀವು ನಿಜ ಜೀವನದಲ್ಲಿ ಇತರರ ದಾಸ್ಯ-ಆರಾಧನೆ (ಇಬಾದತ್) ಮಾಡುತ್ತಿರುವಾಗ, ನಾವು ಇಂತಹವನನ್ನೇ ನಮ್ಮ ಆರಾಧ್ಯನೆಂದು ನಂಬಿದ್ದೇವೆಂಬ ನಿಮ್ಮ ಹೇಳಿಕೆ ಮತ್ತು ನಿಮ್ಮ ಕೊರಳ ಮೇಲೆ ಅಲಂಕೃತವಾಗಿರುವ ಶಿರವನ್ನು ಅವನ ಮುಂದೆ ಸಾಷ್ಟಾಂಗವೆರಗಿ ನೆಲಕ್ಕೂರುವ ನಿಮ್ಮ ಕೃತ್ಯವು ಕೇವಲ ಒಂದು ಕೃತಕ ಹಾಗೂ ಪೊಳ್ಳು ಕೃತ್ಯವೆನಿಸುತ್ತದೆ. ವಾಸ್ತವದಲ್ಲಿ ನೀವು ಜೀವನದಲ್ಲಿ ಯಾರ ಆದೇಶಗಳ ಪಾಲನೆ ಮಾಡುತ್ತಿರುವಿರೋ, ಯಾರು ನಿಷೇಧಿಸಿದ ಕೃತ್ಯಗಳನ್ನು ನೀವು ನಿಮ್ಮ ಮೇಲೆ ನಿಷೇಧಿಸಿಕೊಳ್ಳುತ್ತೀರೋ ಯಾರು ನಿಶ್ಚಯಿಸಿದ ಮಿತಿ ಮೇರೆಗಳ ಒಳಗಿದ್ದು ನೀವು ಕಾರ್ಯ ನಿರ್ವಹಿಸುವಿರೋ, ಯಾರು ನಿಶ್ಚಯಿಸಿದ ನಿಯಮಗಳನ್ನು ನೀವು ಅನುಸರಿಸುವಿರೋ, ಯಾರು ನಿಗದಿಪಡಿಸಿದ ವಿಧಿ-ವಿಧಾನಗಳ ಪ್ರಕಾರ ನೀವು ನಿಮ್ಮ ಸಂಪತ್ತುಗಳನ್ನು ಇತರರಿಗೆ ಕೊಡುವ ಮತ್ತು ಅವರಿಂದ ತೆಗೆದುಕೊಳ್ಳುವ ವ್ಯವಹಾರಗಳನ್ನು ನಡೆಸುತ್ತಿರುವಿರೋ ಯಾರ ತೀರ್ಪಿಗಾಗಿ ನೀವು ನಿಮ್ಮ ಮೊಕದ್ದಮೆಗಳನ್ನು ಒಯ್ಯುತ್ತೀರೋ ನಿಮ್ಮ ಪರಸ್ಪರ ಸಂಬಂಧಗಳು ಮತ್ತು ಹಕ್ಕು ಬಾಧ್ಯತೆಗಳು ಯಾರ ಶರೀಅತ್‌ನ ಆಧಾರದಲ್ಲಿ

ನಿಯಂತ್ರಿಸಲ್ಪಡುತ್ತವೆಯೋ ಮತ್ತು ಯಾರ ಆದೇಶದ ಪ್ರಕಾರ ನೀವು ನಿಮ್ಮ ಶಾರೀರಿಕ ಮತ್ತು ಮಾನಸಿಕ ಸಾಮರ್ಥ್ಯಗಳನ್ನೂ ನಿಮ್ಮ ಸಂಪಾದನೆಯನ್ನೂ ಕೊನೆಗೆ ನಿಮ್ಮ ಜೀವನಗಳನ್ನೂ ಅರ್ಪಿಸಿ ಬಿಡುತ್ತೀರೋ ಅವನೇ ನಿಮ್ಮ ನೈಜ ಆರಾಧ್ಯನಾಗಿರುವನು. ನೀವು ನಿಜಾರ್ಥದಲ್ಲಿ ಅವನ ಇಬಾದತ್ ಅಥವಾ ದಾಸ್ಯ-ಆರಾಧನೆಯನ್ನೇ ಮಾಡುತ್ತಿರುವಿರಿ.

ಈಗ, ಒಂದು ವೇಳೆ ನಿಮ್ಮ ನಂಬಿಕೆ ಒಂದು ವಿಷಯದ ಮೇಲಿದ್ದು ವಾಸ್ತವದಲ್ಲಿ ನೀವು ಮಾಡುತ್ತಿರುವುದು ಅದಕ್ಕೆ ತೀರಾ ತದ್ವಿರುದ್ಧವಾಗಿದ್ದರೆ ಆಗ ಗಣನೆಗೆ ಬರುವುದು ವಾಸ್ತವಿಕತೆಯೇ ಹೊರತು ನಂಬಿಕೆಯಲ್ಲ. ಇಂತಹ ಸನ್ನಿವೇಶದಲ್ಲಿ ನಂಬಿಕೆಗೆ ಯಾವ ಸ್ಥಾನವೂ ಇಲ್ಲ. ಇಂತಹ ನಂಬಿಕೆಗೆ ಬೆಲೆಯೂ ಇರುವುದಿಲ್ಲ. ನೀವು ವಾಸ್ತವದಲ್ಲಿ ದೊರೆಯ ದೀನ್ ಅಥವಾ ಧರ್ಮದಲ್ಲಿದ್ದರೆ ಅದರಲ್ಲಿ ಅಲ್ಲಾಹನ 'ದೀನ್'ಗೆ ಯಾವ ಸ್ಥಾನವೂ ಇರಲಾರದು. ನೀವು ವಾಸ್ತವದಲ್ಲಿ ಪ್ರಜಾಸತ್ತಾತ್ಮಕ ಬಹುಸಂಖ್ಯೆಯ ದೀನ್, ಬ್ರಿಟಿಷರ ದೀನ್, ಜರ್ಮನಿಯ ದೀನ್ ಅಥವಾ ನಿಮ್ಮ ದೇಶದ ದೀನನ್ನು ಅನುಸರಿಸುವವರಾಗಿದ್ದರೆ ಈ 'ದೀನ್'ಗಳಲ್ಲೂ ಅಲ್ಲಾಹನ 'ದೀನ್'ಗೆ ಯಾವುದೇ ಸ್ಥಾನ ಇರಲಾರದು. ಹಾಗೆಯೇ ನೀವು ವಾಸ್ತವದಲ್ಲಿ ಅಲ್ಲಾಹನ ದೀನ್‌ನಲ್ಲಿ ಇರುವವರಾಗಿದ್ದರೆ ಇದರಲ್ಲೂ ಬೇರೆ 'ದೀನ್'ಗಳಿಗೆ ಯಾವುದೇ ಅವಕಾಶವಿರಲು ಸಾಧ್ಯವಿಲ್ಲ. ಶಿರ್ಕ್ ಎಲ್ಲೇ ಇದ್ದರೂ ಅದು ಸುಳ್ಳು ಮತ್ತು ಮಿಥ್ಯವೇ ಆಗಿರುವುದು ಎಂಬ ಅಂಶವನ್ನು ಇಲ್ಲಿ ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು.

ಪ್ರಸ್ತುತ ವಿಷಯವನ್ನು ಮನನ ಮಾಡಿಕೊಂಡ ಬಳಿಕ ನೀವು ಸುಲಭವಾಗಿ ಧರ್ಮ ಯಾವುದೇ ಆಗಿದ್ದರೂ ಅದು ತನ್ನದೇ ಆಡಳಿತ ಅಥವಾ ಸರಕಾರವನ್ನು ಸ್ಥಾಪಿಸಬಯಸುತ್ತದೆ ಎಂಬ ತೀರ್ಮಾನಕ್ಕೆ ಬರಬಹುದು. ಇದಕ್ಕೆ ಯಾವುದೇ ದೀರ್ಘ ಚರ್ಚೆ ಅಥವಾ ವಾದದ ಅಗತ್ಯ ಉಳಿಯುವುದಿಲ್ಲ. ಪ್ರಜಾಸತ್ತೆಯ ಧರ್ಮವಿರಲಿ, ದೊರೆಗಳ ಧರ್ಮವಿರಲಿ, ಸಮಾಜವಾದಿ ಧರ್ಮವಿರಲಿ, ದೇವದತ್ತ ಧರ್ಮವಿರಲಿ ಅಥವಾ ಇನ್ನಾವುದೇ ಧರ್ಮವಿರಲಿ ಪ್ರತಿಯೊಂದು ಧರ್ಮವೂ ತಾನು ಸ್ಥಾಪಿತವಾಗಬೇಕಿದ್ದರೆ ಅದಕ್ಕೆ ತನ್ನದೇ ಆದ ಸರಕಾರ ಮತ್ತು ಆಡಳಿತದ ಅಗತ್ಯವಿರುತ್ತದೆ. ಧರ್ಮದ ಬಳಿ ಸರಕಾರ ಇಲ್ಲದೆ ಇರುವಾಗ ಅದರ ಅವಸ್ಥೆಯು,

ನೆಲದ ಮೇಲೆ ಅಸ್ತಿತ್ವದಲ್ಲಿಲ್ಲದ ಆದರೂ ನಿಮ್ಮ ಮನಸ್ಸಿನಲ್ಲಿರುವ ಕೇವಲ ಒಂದು ಕಾಲ್ಪನಿಕ ಕಟ್ಟಡದ ನಕಾಶೆಯಂತಿರುತ್ತದೆ. ನೀವು ನಿಜವಾಗಿ ಅಸ್ತಿತ್ವದಲ್ಲಿರುವ ಒಂದು ಕಟ್ಟಡದಲ್ಲಿ ವಾಸಿಸುತ್ತಿದ್ದೀರಿ, ಅದರ ಬಾಗಿಲುಗಳಿಂದಲೇ ಒಳ ಪ್ರವೇಶಿಸಿ ಅದರಿಂದಲೇ ಹೊರ ಬರುತ್ತೀರಿ. ಅದರ ಗೋಡೆ ಮತ್ತು ಚಪ್ಪರಗಳ ಆಶ್ರಯದಲ್ಲೇ ನೀವು ಬದುಕುತ್ತಿದ್ದೀರಿ. ನೀವು ನಿಮ್ಮ ವಾಸ್ತವ್ಯವನ್ನು ಆ ನೈಜ ಕಟ್ಟಡದ ನಕಾಶೆಗೆ ಅನುಗುಣವಾಗಿಯೇ ರೂಪಿಸಿಕೊಳ್ಳಬೇಕಾಗುತ್ತದೆ. ಹೀಗಿರುತ್ತಾ ಆ ಕಾಲ್ಪನಿಕ ನಕಾಶೆಯಿಂದ ಪ್ರಯೋಜನವೇನು? ನೀವು ಒಂದು ನಿರ್ದಿಷ್ಟ ನಕಾಶೆಯ ಕಟ್ಟಡದೊಳಗೆ ಬದುಕುತ್ತಿರುವಾಗ ಬೇರೊಂದು ಬಗೆಯ ನಕಾಶೆ ನಿಮ್ಮ ಮನಸ್ಸಿನಲ್ಲಿದ್ದರೆ ಅಥವಾ ಆ ಬಗ್ಗೆ ನಿಮಗೆ ಶ್ರದ್ಧೆ ಇದ್ದರೆ ಅದರಿಂದ ಲಾಭವೇನು? ಆ ಕಾಲ್ಪನಿಕ ನಕಾಶೆಯು ನಿಮ್ಮ ಮನಸ್ಸಿಗೇ ಸೀಮಿತವಾಗಿರುವುದು. ನೀವಂತೂ ವಾಸ್ತವದಲ್ಲಿ ಭೂಮಿಯ ಮೇಲಿರುವ ನೈಜ ಕಟ್ಟಡದಲ್ಲೇ ವಾಸಿಸುತ್ತಲಿರುತ್ತೀರಿ. ಕಟ್ಟಡ ಎಂಬ ಶಬ್ದವು ನಿಮ್ಮ ಮನಸ್ಸಿನಲ್ಲಿರುವ ಆ ಕಾಲ್ಪನಿಕ ನಕಾಶೆಗೆ ಅನ್ವಯಿಸುವುದಿಲ್ಲ. ಅಂತಹ ಕಟ್ಟಡದಲ್ಲಿ ಯಾರಿಗೂ ವಾಸಿಸಲು ಸಾಧ್ಯವಿಲ್ಲ. ಯಾವುದರ ತಳಪಾಯವು ಭೂಮಿಯಲ್ಲಿದೆಯೋ ಮತ್ತು ಯಾವುದರ ಗೋಡೆ, ಚಪ್ಪರ ಇತ್ಯಾದಿಗಳು ಭೂಮಿಯ ಮೇಲೆ ನಿರ್ಮಿತವಾಗಿವೆಯೋ ಅಂತಹ ಕಟ್ಟಡವನ್ನು ಮಾತ್ರ ಜನರು ಕಟ್ಟಡವೆಂದು ಕರೆಯುತ್ತಾರೆ. ಅಂತಹ ಕಟ್ಟಡದೊಳಗೆ ಮಾತ್ರ ಜನರಿಗೆ ವಾಸಿಸಲು ಸಾಧ್ಯವಾಗುತ್ತದೆ.

ಇದೇ ರೀತಿ ಒಂದು ಧರ್ಮವು ಸತ್ಯವೆಂದು ಕೇವಲ ನಂಬಿಕೆ ಇಟ್ಟುಕೊಳ್ಳುವುದಕ್ಕೆ ಯಾವ ಅರ್ಥವೂ ಇಲ್ಲ. ಜನರು ಪ್ರಾಯೋಗಿಕವಾಗಿ ಬೇರೊಂದು ಧರ್ಮದಲ್ಲಿದ್ದು ಅದರ ಪ್ರಕಾರ ಜೀವನ ಸಾಗಿಸುತ್ತಿರುವಾಗ ಒಂದು ಧರ್ಮದ ಮೇಲೆ ಕೇವಲ ನಂಬಿಕೆ ಇದೆ ಎಂದು ಹೇಳುವುದರಿಂದ ಯಾವ ಪ್ರಯೋಜನವೂ ಇಲ್ಲ. ಯಾವ ರೀತಿ ಕಾಲ್ಪನಿಕ ನಕಾಶೆಯನ್ನು ಕಟ್ಟಡವೆಂದು ಕರೆಯುವಂತಿಲ್ಲವೋ ಹಾಗೆಯೇ ಕಾಲ್ಪನಿಕ ದೀನ್ ಅಥವಾ ಧರ್ಮವನ್ನು ಧರ್ಮವೆಂದು ಕರೆಯುವಂತಿಲ್ಲ. ಯಾವ ರೀತಿ ಕಾಲ್ಪನಿಕ ಕಟ್ಟಡದೊಳಗೆ ಯಾರಿಗೂ ವಾಸಿಸಲು ಸಾಧ್ಯವಿಲ್ಲವೋ ಹಾಗೆಯೇ ಒಂದು ಕಾಲ್ಪನಿಕ ಧರ್ಮದೊಳಗೂ ಯಾರಿಗೂ ಬದುಕಲು ಸಾಧ್ಯವಿಲ್ಲ. ಭೂಮಿಯಲ್ಲಿ ಯಾವ ವ್ಯವಸ್ಥೆ ಅಧಿಕಾರ ಸ್ಥಾಪಿಸಿಕೊಂಡಿದೆಯೋ, ಯಾರ ಕಾನೂನು ಜಾರಿಯಲ್ಲಿದೆಯೋ, ಯಾರ ನಿಯಮಗಳ ಪ್ರಕಾರ ಜೀವನದ ವ್ಯವಹಾರ

ನಡೆಯುತ್ತಿದೆಯೋ ಅದುವೇ ದೀನ್ ಅಥವಾ ಧರ್ಮವಾಗಿದೆ. ಆದ್ದರಿಂದಲೇ ಪ್ರತಿಯೊಂದು ಧರ್ಮವು ತನ್ನ ಸಾಕ್ಷಾತ್ ಪ್ರಕೃತಿಗನುಗುಣವಾಗಿ ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಬಯಸುತ್ತದೆ. ನಿಜವಾಗಿ ಧರ್ಮವು ಇರುವುದೇ ಅದು ಯಾರ ಆಧಿಪತ್ಯವನ್ನು ಜಗತ್ತು ಅಂಗೀಕರಿಸಬೇಕೆಂದು ಬಯಸುತ್ತದೋ, ಜಗತ್ತಿನಲ್ಲಿ ಆತನ ಇಬಾದತ್(ದಾಸ್ಯ-ಆರಾಧನೆ) ಮಾತ್ರ ನಡೆಯಬೇಕು ಮತ್ತು ಆತನ ಶರೀಅತ್ (ಕಾನೂನು-ನಿಯಮ) ಮಾತ್ರವೇ ಅನುಷ್ಠಾನದಲ್ಲಿರಬೇಕು ಎಂಬುದನ್ನು ಪ್ರತಿಪಾದಿಸಲಿಕ್ಕಾಗಿ.

**ಕೆಲವು ಉದಾಹರಣೆಗಳನ್ನು ನೋಡಿರಿ-**

ಪ್ರಜಾಸತ್ತೆಯ ದೀನ್ ಅಥವಾ ಧರ್ಮದ ತಾತ್ಪರ್ಯವೇನು? ಒಂದು ರಾಷ್ಟ್ರದ ಜನತೆ ತಾವೇ ತಮ್ಮ ಪ್ರಭುಗಳಾಗಿರಬೇಕು, ಅವರು ನಿರ್ಮಿಸುವ ಕಾನೂನುಗಳನ್ನೇ ಅವರ ಮೇಲೆ ಜಾರಿಗೊಳಿಸಬೇಕು ಮತ್ತು ರಾಷ್ಟ್ರದ ಎಲ್ಲ ಪ್ರಜೆಗಳು ತಮ್ಮ ಪ್ರಜಾಸತ್ತಾತ್ಮಕ ಆಡಳಿತದ ಆಜ್ಞಾನುಸಾರಿಗಳಾಗಿರಬೇಕು ಎಂಬುದೇ ಅಲ್ಲವೇ? ಒಂದು ಪ್ರಜಾಸತ್ತಾತ್ಮಕ ಸರಕಾರವು ಅಧಿಕಾರ ವಹಿಸಿಕೊಂಡು ಪ್ರಜಾಸತ್ತಾತ್ಮಕ ಕಾನೂನುಗಳು ಅನುಷ್ಠಾನಗೊಳ್ಳುವ ತನಕ ಈ ಪ್ರಜಾಸತ್ತಾತ್ಮಕ ಧರ್ಮವು ಎಲ್ಲಾದರೂ ಸ್ಥಾಪಿತವಾಗಲು ಸಾಧ್ಯವೇ? ಒಂದು ರಾಷ್ಟ್ರದಲ್ಲಿ ಅಲ್ಲಿಯ ಬಹುಸಂಖ್ಯಾತ ಪ್ರಜೆಗಳ ಬದಲು ಬೇರೊಂದು ರಾಷ್ಟ್ರದವರು ಅಥವಾ ಒಬ್ಬ ದೊರೆ ಬಂದು ಅಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡು ತನ್ನ ಕಾನೂನುಗಳನ್ನು ಅಲ್ಲಿ ಜಾರಿಗೊಳಿಸಿದರೆ ಮತ್ತೆ ಅಲ್ಲಿ ಪ್ರಜಾಸತ್ತೆಯ ಧರ್ಮ ಉಳಿಯುತ್ತದೆಯೇ? ಇಂತಹ ಸ್ಥಳದಲ್ಲಿ ಯಾರಾದರೊಬ್ಬನು ತನ್ನ ಮನಸ್ಸಿನೊಳಗೆ ಪ್ರಜಾಸತ್ತಾತ್ಮಕ ವ್ಯವಸ್ಥೆಯ ಮೇಲಿನ ನಂಬಿಕೆಯನ್ನು ಇಟ್ಟುಕೊಳ್ಳಬಹುದು. ಆದರೆ ಅಲ್ಲಿ ಬೇರೊಂದು ದೇಶದ ಅಥವಾ ಒಬ್ಬ ದೊರೆಯ ಆಡಳಿತವು ಅಸ್ತಿತ್ವದಲ್ಲಿರುವ ತನಕ ಆ ವ್ಯಕ್ತಿಗೆ ಪ್ರಜಾಸತ್ತೆಯ ನಿಯಮಗಳನ್ನು ಅನುಸರಿಸಲು ಖಂಡಿತ ಸಾಧ್ಯವಾಗುವುದಿಲ್ಲ.

ಇನ್ನು ನಾವು ರಾಜಾಳ್ವಿಕೆಯ ದೀನ್ ಅಥವಾ ದೊರೆಯ ಧರ್ಮವನ್ನು ತೆಗೆದುಕೊಳ್ಳೋಣ. ಈ ದೀನ್ ಅಥವಾ ವ್ಯವಸ್ಥೆಯು ಒಬ್ಬ ದೊರೆಯನ್ನು ಪರಮೋಚ್ಚ ಆಡಳಿತಾಧಿಕಾರಿಯೆಂದು ಘೋಷಿಸುವುದು, ಎಲ್ಲರೂ ಅವನ ಆಜ್ಞಾಪಾಲನೆ

ಮತ್ತು ಅನುಸರಣೆಯನ್ನೇ ಮಾಡಬೇಕು ಹಾಗೂ ಅವನ ಶರೀಅತ್ ಅಥವಾ ಕಾನೂನು-ನಿಯಮಗಳೇ ಅನುಷ್ಠಾನವಾಗಬೇಕು ಎಂಬ ಉದ್ದೇಶದಿಂದಲ್ಲವೇ? ಹಾಗಲ್ಲದಿದ್ದರೆ ದೊರೆಯನ್ನು ದೊರೆಯೆಂದು ಮತ್ತು ಅವನೇ ಪರಮೋಚ್ಚ ಆಡಳಿತಾಧಿಕಾರಿಯೆಂದು ಅಂಗೀಕರಿಸುವುದಕ್ಕೆ ಅರ್ಥವೇನಿದೆ? ನಾಡಿನಲ್ಲಿ ಪ್ರಜಾಸತ್ತಾತ್ಮಕ ದೀನ್ ಅಥವಾ ವ್ಯವಸ್ಥೆಯು ಅಸ್ತಿತ್ವದಲ್ಲಿರುವಾಗ ಅಥವಾ ಬೇರೆ ಯಾವುದಾದರೂ ವ್ಯವಸ್ಥೆಯ ಸರಕಾರ ಅಧಿಕಾರದಲ್ಲಿರುವಾಗ ದೊರೆಯ ಧರ್ಮ ಅಲ್ಲಿ ಅಸ್ತಿತ್ವದಲ್ಲಿರಲು ಮತ್ತು ಯಾರಾದರೂ ದೊರೆಯ ಧರ್ಮವನ್ನು ಅನುಸರಿಸಲು ಹೇಗೆ ತಾನೇ ಸಾಧ್ಯ?

ದೂರ ಹೋಗಬೇಕಾಗಿಲ್ಲ. ಸದ್ಯ ಭಾರತದ ದೀನ್ ಆಗಿರುವ ಬ್ರಿಟಿಷರ ದೀನನ್ನೇ ನೋಡಿಕೊಳ್ಳಿರಿ.* ಈ ದೀನ್ ಇಲ್ಲಿ ನಡೆಯುತ್ತಿರುವುದು ಇಲ್ಲಿ ಬ್ರಿಟಿಷರ ಬಲದಿಂದ ಅವರು ಮೆಚ್ಚುವ ದಂಡ ಸಂಹಿತೆ ಮತ್ತು ಪೌರ ಸಂಹಿತೆಗಳು ಅನುಷ್ಠಾನದಲ್ಲಿವೆ, ನಿಮ್ಮ ಜೀವನದ ವ್ಯವಹಾರಗಳೆಲ್ಲವೂ ಬ್ರಿಟಿಷರು ನಿಗದಿಪಡಿಸಿದ ನಿಯಮಗಳ ಪ್ರಕಾರ ನಡೆಯುತ್ತಿವೆ ಮತ್ತು ನೀವೆಲ್ಲಾ ಬ್ರಿಟಿಷ್ ಸರಕಾರದ ಆದೇಶಗಳನ್ನು ಶಿರಸಾ ವಹಿಸುತ್ತಿರುವಿರಿ ಎಂಬ ಕಾರಣದಿಂದಲೇ ಅಲ್ಲವೇ? ಈ ದೀನ್, ಧರ್ಮ ಅಥವಾ ವ್ಯವಸ್ಥೆಯು ಇಷ್ಟು ಪರಿಣಾಮಕಾರಿಯಾಗಿ ಅನುಷ್ಠಾನದಲ್ಲಿರುವ ತನಕ ನೀವು ವ್ಯಕ್ತಿಗತವಾಗಿ ಬೇರೆ ಯಾವ ವ್ಯವಸ್ಥೆಯ ಮೇಲೆ ನಂಬಿಕೆಯುಳ್ಳವರಾಗಿದ್ದರೂ ಆ ವ್ಯವಸ್ಥೆ ಅಥವಾ ದೀನ್‌ಗೆ ಇಲ್ಲಿ ಯಾವ ಸ್ಥಾನವೂ ಇರುವುದಿಲ್ಲ. ಇನ್ನು ಒಂದು ವೇಳೆ ಇಲ್ಲಿ ಪ್ರಚಲಿತ ದಂಡಸಂಹಿತೆ, ಪೌರ ಸಂಹಿತೆಗಳೆಲ್ಲಾ ಇಲ್ಲವಾಗಿ, ಬ್ರಿಟಿಷರ ಆಜ್ಞಾಪಾಲನೆಯೂ ನಿಂತು ಹೋದರೆ ಆ ಬಳಿಕ ಇಲ್ಲಿ ಬ್ರಿಟಿಷರ ದೀನ್ ಜಾರಿಯಲ್ಲಿದೆ ಎನ್ನುವುದಕ್ಕೆ ಯಾವ ಅರ್ಥ ತಾನೇ ಉಳಿದೀತು?

ಇಸ್ಲಾಮ್ ಎಂಬ ದೀನ್ ಅಥವಾ ಧರ್ಮದ ಸಂಗತಿಯೂ ಇಷ್ಟೇ. ಕೇವಲ ಅಲ್ಲಾಹನೊಬ್ಬನೇ ಭೂಮಿಯ ಮಾಲಕ ಮತ್ತು ಮಾನವರ ನೈಜ ಆಡಳಿತಗಾರ. ಆದ್ದರಿಂದ ಕೇವಲ ಅವನೊಬ್ಬನ ದಾಸ್ಯ ಮತ್ತು ಆರಾಧನೆಯೇ ನಡೆಯಬೇಕು ಮತ್ತು ಮಾನವ ಜೀವನದ ಎಲ್ಲ ವ್ಯವಹಾರಗಳು ಅವನ ಶರೀಅತ್‌ನ ಪ್ರಕಾರವೇ

---

* ಇವು ಸ್ವಾತಂತ್ರ್ಯ ಪೂರ್ವದಲ್ಲಿ ಹೇಳಿದ ಮಾತುಗಳು - ಅನು.

ನಿಯಂತ್ರಿಸಲ್ಪಡಬೇಕು ಎಂಬುದು ಈ ಧರ್ಮದ ಮೂಲ ಆಶಯ. ಅಲ್ಲಾಹನೇ ಸಾರ್ವಭೌಮನೆಂಬ ಈ ಮೂಲತತ್ವವನ್ನು ಮುಂದಿಡುವ ಮೂಲಕ ಇಸ್ಲಾಮ್ ಧರ್ಮವು ಸಾಧಿಸ ಬಯಸುವ ಉದ್ದೇಶವೂ - ಭೂಮಿಯಲ್ಲಿ ಕೇವಲ ಅಲ್ಲಾಹನ ಅಧಿಕಾರ ನಡೆಯಬೇಕು, ನ್ಯಾಯಾಲಯಗಳಲ್ಲಿ ಅವನ ಶರೀಅತ್‌ನ ಪ್ರಕಾರವೇ ತೀರ್ಪುಗಳಾಗಬೇಕು, ಪೋಲೀಸರು ಅವನ ಆದೇಶಗಳನ್ನೇ ಜಾರಿಗೊಳಿಸಬೇಕು, ವ್ಯಾಪಾರ ವ್ಯವಹಾರಗಳಲ್ಲೂ ಅವನ ಧರ್ಮದ ನಿಯಮಗಳೇ ಪಾಲಿಸಲ್ಪಡಬೇಕು, ಅವನು ಇಚ್ಛಿಸುವ ಪ್ರಕಾರವೇ ತೆರಿಗೆಗಳು ಸಂಗ್ರಹಿಸಲ್ಪಡಬೇಕು, ಅವನು ನಿಗದಿಪಡಿಸಿರುವಂತಹ ವಿಧಾನಗಳಲ್ಲೇ ಈ ಆದಾಯವು ವ್ಯಯಿಸಲ್ಪಡಬೇಕು. ಸಿವಿಲ್ ಸರ್ವಿಸ್ ಮತ್ತು ಸೇನಾ ಪಡೆಗಳು ಕೂಡಾ ಅವನ ಧರ್ಮದ ಆದೇಶಗಳಿಗೆ ಬದ್ಧವಾಗಿರಬೇಕು, ಜನರಿಗೆ ಕೇವಲ ಅವನೊಬ್ಬನ ಭಯ ಮಾತ್ರ ಇರಬೇಕು. ಒಟ್ಟಿನಲ್ಲಿ ಜನರು ಅವನ ಹೊರತು ಬೇರೆ ಯಾರ ದಾಸರೂ ಆಗಿರಬಾರದು- ಎಂಬುದೇ ಆಗಿದೆ. ಅಪ್ಪಟ ದೇವ ಪ್ರಧಾನ ಸರಕಾರ ನಿರ್ಮಾಣವಾಗುವವರೆಗೂ ಈ ಉದ್ದೇಶವು ಈಡೇರಲಾರದೆಂಬುದು ವ್ಯಕ್ತ. ಈ ಧರ್ಮ ಅಥವಾ ವ್ಯವಸ್ಥೆಯು ಬೇರಾವುದೇ ಧರ್ಮದೊಂದಿಗೆ ಸಹಭಾಗಿತ್ವವನ್ನು ಸಮ್ಮತಿಸುವುದಿಲ್ಲ. ಯಾವ ಧರ್ಮ ತಾನೇ ಬೇರೊಂದು ಧರ್ಮದೊಂದಿಗೆ ಸಹಭಾಗಿತ್ವವನ್ನು ಒಪ್ಪಿಕೊಂಡೀತು? ಬೇರೆಲ್ಲಾ ದೀನ್, ಧರ್ಮ ಅಥವಾ ವ್ಯವಸ್ಥೆಗಳಂತೆ ಈ ದೀನ್ ಕೂಡಾ ಆಡಳಿತಾಧಿಕಾರವು ಕೇವಲ ನನ್ನದಾಗಿರಬೇಕು, ಅನ್ಯ ದೀನ್‌ಗಳೆಲ್ಲಾ ನನಗೆ ಅಧೀನವಾಗಿರಬೇಕು, ಅನ್ಯಥಾ ನನ್ನ ಯಥಾರ್ಥ ಅನುಸರಣೆ ಮಾಡಲು ಜನರಿಗೆ ಸಾಧ್ಯವಾಗದು. ನಾನಿದ್ದಲ್ಲಿ ಪ್ರಜಾಸತ್ತೆಯ ದೀನ್ ಇರಬಾರದು, ರಾಜ ಮಹಾರಾಜರ ದೀನ್ ಇರಬಾರದು, ಸಮಾಜವಾದೀ ದೀನ್ ಇರಬಾರದು ಮಾತ್ರವಲ್ಲ ಬೇರೆ ಯಾವ ದೀನ್ ಕೂಡಾ ಇರಬಾರದು. ಬೇರೆ ದೀನ್‌ಗಳಿದ್ದಲ್ಲಿ ನಾನು ಇರಲಾರೆ. ಬೇರೆ ದೀನ್‌ಗಳಿರುವಲ್ಲಿ ನನ್ನನ್ನು ಕೇವಲ ಸತ್ಯವೆಂದು ಒಪ್ಪುವುದರಿಂದ ಯಾವ ಪುರುಷಾರ್ಥವನ್ನೂ ಸಾಧಿಸಿದಂತಾಗುವುದಿಲ್ಲ- ಎಂದು ಘೋಷಿಸುತ್ತದೆ. ಇದನ್ನೇ ಪವಿತ್ರ ಕುರ್‌ಆನ್ ಪದೇ ಪದೇ ಪುನರಾವರ್ತಿಸುತ್ತದೆ. ಉದಾ:

"ಜನರಿಗೆ, ಅವರು ಇತರೆಲ್ಲ ದಿಕ್ಕುಗಳಿಂದ ವಿಮುಖರಾಗಿ ತಮ್ಮ ದೀನನ್ನು ಕೇವಲ ಅಲ್ಲಾಹನಿಗೆ ಮೀಸಲಾಗಿಟ್ಟು ಅವನ ಇಬಾದತ್ (ದಾಸ್ಯ-ಆರಾಧನೆ)ಅನ್ನೇ

ಮಾಡಬೇಕು ಎಂದಲ್ಲದೆ ಬೇರೇನನ್ನೂ ಆದೇಶಿಸಲಾಗಿಲ್ಲ." (98:5)

"ಅವನೇ, ತನ್ನ ಸಂದೇಶವಾಹಕರನ್ನು ಸನ್ಮಾರ್ಗದರ್ಶನ ಮತ್ತು ಸತ್ಯ ದೀನ್(ಧರ್ಮ)ನೊಂದಿಗೆ ಕಳುಹಿಸಿದನು- ಸಮಸ್ತ ದೀನ್‌ಗಳೆದುರು ಇದನ್ನು ವಿಜಯಿಯಾಗಿ ಮಾಡುವುದಕ್ಕಾಗಿ. ಬಹುದೇವಾರಾಧಕರಿಗೆ ಇದು ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ." (9:33)

"ಕ್ಷೋಭೆಯು ಅಳಿದು, ದೀನ್ ಸಂಪೂರ್ಣವಾಗಿ ಅಲ್ಲಾಹನಿಗೆ ಮೀಸಲಾಗುವ ತನಕ ನೀವು ಅವರ ವಿರುದ್ಧ ಹೋರಾಡಿರಿ." (8:39)

"ಆಜ್ಞಾಧಿಕಾರವು ಅಲ್ಲಾಹನ ಹೊರತು ಬೇರಾರಿಗೂ ಇಲ್ಲ. ನೀವು ಅವನ ಹೊರತು ಬೇರೆ ಯಾರ ಇಬಾದತನ್ನೂ (ದಾಸ್ಯ-ಆರಾಧನೆಯನ್ನೂ) ಮಾಡಬಾರದೆಂದು ಅವನು ಆದೇಶಿಸಿರುವನು." (12:40)

"ತನ್ನ ಪ್ರಭುವನ್ನು ಭೇಟಿಯಾಗಲಿಕ್ಕಿದೆಯೆಂದು ನಿರೀಕ್ಷಿಸುವಾತನು ಸತ್ಕರ್ಮಗಳನ್ನು ಮಾಡಲಿ ಮತ್ತು ತನ್ನ ಪ್ರಭುವಿನ ಇಬಾದತ್‌ನಲ್ಲಿ ಬೇರಾರನ್ನೂ ಸಹಭಾಗಿಗಳಾಗಿ ಮಾಡದಿರಲಿ." (18:110)

"ನಾವು ನಿಮ್ಮ ಮೇಲೂ ನಿಮಗಿಂತ ಮುಂಚೆಯೂ ಅವತೀರ್ಣವಾದ ದಿವ್ಯ ಸಂದೇಶದ ಮೇಲೆ ವಿಶ್ವಾಸವಿರಿಸಿದ್ದೇವೆಂದು ಹೇಳಿಕೊಳ್ಳುತ್ತಲೇ ತಮ್ಮ ವ್ಯವಹಾರಗಳ ತೀರ್ಮಾನವನ್ನು ತಾಗೂತ್ (ದೇವೇತರ ಶಕ್ತಿ)ಗಳ ಬಳಿಗೆ ಒಯ್ಯ ಬಯಸುವವರನ್ನು ನೀವು ನೋಡಲಿಲ್ಲವೇ? ವಾಸ್ತವದಲ್ಲಿ ತಾಗೂತನ್ನು ಧಿಕ್ಕರಿಸಬೇಕೆಂದು ಅವರಿಗೆ ಆದೇಶ ನೀಡಲಾಗಿತ್ತು...... ನಾವು ಪ್ರತಿಯೊಬ್ಬ ಸಂದೇಶವಾಹಕರನ್ನು, ಅಲ್ಲಾಹನ ಆಜ್ಞೆಯಂತೆ ಅವರು ಅನುಸರಿಸಲ್ಪಡಬೇಕು ಎಂಬ ಉದ್ದೇಶದಿಂದಲೇ ಕಳುಹಿಸಿರುವೆವು." (4:60-64)

ಈಗಾಗಲೇ ಇಬಾದತ್, ದೀನ್ ಮತ್ತು ಶಿರ್ಕ್ ಎಂಬ ಪದಗಳಿಗೆ ನಾನು ನೀಡಿರುವ ವಿವರಣೆಯು ನಿಮ್ಮ ಗಮನದಲ್ಲಿದ್ದರೆ, ಪ್ರಸ್ತುತ ವಾಕ್ಯಗಳ ಮೂಲಕ ಪವಿತ್ರ ಕುರ್‌ಆನ್ ಸಾರುತ್ತಿರುವುದೇನು ಎಂಬುದನ್ನು ಗ್ರಹಿಸಲು ನಿಮಗೇನೂ ಕಷ್ಟವಾಗದು.

ಇದರಿಂದ, ಇಸ್ಲಾಮ್ ಧರ್ಮದಲ್ಲಿ ಜಿಹಾದ್‌ಗೆ ಇಷ್ಟು ಹೆಚ್ಚು ಮಹತ್ವವನ್ನು ಏಕೆ ನೀಡಲಾಗಿದೆ ಎಂಬುದು ಬಹಳ ಸ್ಪಷ್ಟವಾದಂತಾಯಿತು. ಇತರೆಲ್ಲ ಧರ್ಮಗಳಂತೆ

ಅಲ್ಲಾಹನ ಧರ್ಮವು ನೀವು ಕೇವಲ ಅದು ಸತ್ಯವೆಂದು ಒಪ್ಪಿದ ಮಾತ್ರಕ್ಕೆ ಮತ್ತು ನಿಮ್ಮ ನಂಬಿಕೆಯ ಸಂಕೇತವಾಗಿ ಕೆಲವು ಔಪಚಾರಿಕ ಪೂಜೆ ಪುರಸ್ಕಾರಗಳನ್ನು ನೆರವೇರಿಸಿದ ಮಾತ್ರಕ್ಕೆ ತೃಪ್ತಿ ಪಡುವುದಿಲ್ಲ. ನಿಜವಾಗಿ ನೀವು ಬೇರಾವುದಾದರೂ ದೀನ್ ಅಥವಾ ವ್ಯವಸ್ಥೆಯ ಅಧೀನದಲ್ಲಿದ್ದು ಈ ದೀನ್‌ನ ಅನುಸರಣೆ ಮಾಡಲು ಸಾಧ್ಯವೇ ಇಲ್ಲ. ಹಾಗೆಯೇ ಬೇರೆ ಯಾವುದಾದರೂ ದೀನ್‌ನ ಸಹಭಾಗಿತ್ವದಲ್ಲಿದ್ದುಕೊಂಡೂ ನೀವು ಈ ದೀನನ್ನು ಅನುಸರಿಸುವಂತಿಲ್ಲ. ಆದ್ದರಿಂದ ನೀವು ನಿಜಕ್ಕೂ ಈ ಧರ್ಮವು ಸತ್ಯವೆಂದು ನಂಬುವವರಾಗಿದ್ದರೆ ಈ ಧರ್ಮವನ್ನು ಈ ಭೂಮಿಯಲ್ಲಿ ಸ್ಥಾಪಿಸಲಿಕ್ಕಾಗಿ ನಿಮ್ಮ ಸರ್ವಸ್ವವನ್ನೂ ಮುಡಿಪಾಗಿಟ್ಟು ಹೋರಾಡುವುದು ಮತ್ತು ಹೀಗೆ ಹೋರಾಡಿ ಈ ಧರ್ಮವನ್ನು ನಿಜವಾಗಿಯೂ ಸ್ಥಾಪಿಸುವುದು ಅಥವಾ ಈ ನಿಟ್ಟಿನಲ್ಲಿ ಹೋರಾಡುತ್ತಲೇ ಪ್ರಾಣ ಬಿಡುವುದರ ಹೊರತು ನಿಮಗೆ ಬೇರೆ ಯಾವ ಮಾರ್ಗೋಪಾಯವೂ ಇಲ್ಲ. ನೀವು ಹೇಳಿಕೊಳ್ಳುವಂತಹ ಧರ್ಮವಿಶ್ವಾಸ ನಿಜಕ್ಕೂ ನಿಮ್ಮಲ್ಲಿ ಇದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲಿಕ್ಕಿರುವ ಮಾನದಂಡವೂ ಇದುವೇ. ನಿಮ್ಮ ವಿಶ್ವಾಸವು ನೈಜವಾಗಿದ್ದರೆ ನೀವು ಅನ್ಯ ದೀನ್‌ಗಳ ಅಧೀನದಲ್ಲಿ ಬದುಕುತ್ತಿರುವಾಗ ಆ ದೀನ್‌ಗಳಿಗೆ ಸೇವೆ ಸಲ್ಲಿಸುತ್ತಾ ಅದರಿಂದ ಸಂಪಾದಿಸುವ ಅನ್ನವನ್ನು ಆಸ್ವದಿಸುತ್ತಾ ಆರಾಮವಾಗಿ ಬಾಳುವುದಂತೂ ಹಾಗಿರಲಿ, ನಿಮಗೆ ಅದರಡಿಯಲ್ಲಿ ಒಂದು ದಿನದ ಮಟ್ಟಿಗೂ ನೆಮ್ಮದಿಯ ನಿದ್ದೆ ಬರಲಾರದು. ನೀವು ಈ ದೀನ್‌ನಲ್ಲಿ ವಿಶ್ವಾಸವಿರಿಸುತ್ತಾ ಬೇರೆ ದೀನ್‌ಗಳ ಅಧೀನದಲ್ಲಿ ಕಳೆಯಬೇಕಾಗಿ ಬರುವ ಒಂದೊಂದು ಕ್ಷಣವೂ ನಿಮ್ಮ ಪಾಲಿಗೆ ಚಿತ್ರಹಿಂಸೆಯ ಕ್ಷಣವಾಗಿರುವುದು. ನಿಮ್ಮ ಹಾಸಿಗೆಯು ನಿಮಗೆ ಮುಳ್ಳಿನ ಹಾಸಿಗೆಯಂತಾಗುವುದು. ನಿಮ್ಮ ಅನ್ನವು ವಿಷಾನ್ನವೆನಿಸುವುದು. ಸತ್ಯಧರ್ಮದ ಸಂಸ್ಥಾಪನೆಗಾಗಿ ಹೋರಾಡದೆ ನಿಮಗೆ ಕಿಂಚಿತ್ತೂ ನೆಮ್ಮದಿ ಸಿಗಲಾರದು.

ಇನ್ನು ಒಂದು ವೇಳೆ, ಅಲ್ಲಾಹನ ದೀನ್‌ನ ಹೊರತು ಇತರ ದೀನ್‌ಗಳ ಅಧೀನದಲ್ಲಿ ಬದುಕುತ್ತಿರುವಾಗ ನಿಮಗೆ ನೆಮ್ಮದಿ ಸಿಗುತ್ತಿದೆಯೆಂದಾದರೆ ಮತ್ತು ನೀವು ಈ ಅವಸ್ಥೆಯ ಬಗ್ಗೆ ಸಂತೃಪ್ತರಾಗಿರುವಿರಿ ಎಂದಾದರೆ ನೀವು ಸತ್ಯವಿಶ್ವಾಸಿಯೇ ಅಲ್ಲ- ನೀವೆಷ್ಟೇ ಶ್ರದ್ಧೆಯಿಂದ ನಮಾಝ್ ನಿರ್ವಹಿಸುವವರಾಗಿದ್ದರೂ, ಎಷ್ಟು ಸುದೀರ್ಘವಾದ ದೇವಧ್ಯಾನಗಳನ್ನು ಮಾಡುವವರಾಗಿದ್ದರೂ, ಕುರ್‌ಆನ್

ಹದೀಸ್‌ಗಳನ್ನು ವ್ಯಾಖ್ಯಾನ ಮಾಡುವವರಾಗಿದ್ದರೂ, ಇಸ್ಲಾಮಿನ ತತ್ವಶಾಸ್ತ್ರದ ಬಗ್ಗೆ ಎಷ್ಟೇ ದೊಡ್ಡ ಭಾಷಣಗಳನ್ನು ಬಿಗಿಯುವವರಾಗಿದ್ದರೂ ಸರಿಯೇ.

ಇದು, ಅಲ್ಲಾಹನ ಹೊರತು ಅನ್ಯರ ಧರ್ಮಗಳ ಬಗ್ಗೆ ಸಂತೃಪ್ತರಾಗಿರುವವರ ವಿಷಯವಾಯಿತು. ಇನ್ನು ಇತರ ದೀನ್‌ಗಳ ಸೇವೆಯಲ್ಲಿ ನಿರತರಾಗಿರುವ ಮತ್ತು ಬೇರಾವುದೋ ದೀನ್‌ನ (ಉದಾ: ಪ್ರಜಾಸತ್ತೆಯ) ಸ್ಥಾಪನೆಗಾಗಿ ಜಿಹಾದ್ ನಡೆಸುವ ಕಪಟಿಗಳ ಬಗ್ಗೆ ಏನು ತಾನೇ ಹೇಳಲಿ? ಮರಣವಂತೂ ದೂರವೇನಿಲ್ಲ. ಅದರ ಸಮಯವು ಬಂದು ಬಿಟ್ಟಾಗ, ಈ ಜನರು ತಮ್ಮ ಲೌಕಿಕ ಜೀವನದಲ್ಲಿ ಮಾಡಿದ ಸಂಪಾದನೆಯನ್ನು ಸಾಕ್ಷಾತ್ ಅಲ್ಲಾಹನೇ ಇವರ ಮುಂದೆ ಇಟ್ಟು ಬಿಡುವನು. ಇವರು ತಾವು ಮುಸ್ಲಿಮರೆಂದು ಭ್ರಮಿಸಿಕೊಂಡಿದ್ದರೆ ಭಾರೀ ಮೂರ್ಖತನಕ್ಕೆ ಒಳಗಾಗಿದ್ದಾರೆ. ಇವರಿಗೆ ಬುದ್ಧಿ-ವಿವೇಕವೆಂಬುದು ಕಿಂಚಿತ್ತಾದರೂ ಇದ್ದಿದ್ದರೆ, ಒಂದು ಧರ್ಮವನ್ನು ಸತ್ಯವೆಂದು ನಂಬಿ ಅದಕ್ಕೆದುರಾಗಿ ಇನ್ನೊಂದು ಧರ್ಮದ ಸ್ಥಾಪನೆಗಾಗಿ ನಡೆಯುವ ಹೋರಾಟದಲ್ಲಿ ಭಾಗವಹಿಸುವುದು ಅಥವಾ ಬೇರೊಂದು ಧರ್ಮದ ಸ್ಥಾಪನೆಗಾಗಿ ಹೋರಾಡುವುದು ಎಂತಹ ವಿರೋಧಾಭಾಸದ ಕೃತ್ಯವೆಂಬುದು ಅವರಿಗೆ ಮನವರಿಕೆಯಾಗುತ್ತಿತ್ತು. ಎಂದಾದರೂ ನೀರು ಮತ್ತು ಬೆಂಕಿಯು ಒಂದೆಡೆ ಸೇರಬಹುದು. ಆದರೆ ಅಲ್ಲಾಹನ ಮೇಲಿನ ವಿಶ್ವಾಸ ಮತ್ತು ಪ್ರಸ್ತುತ ಕೃತ್ಯವು ಒಂದೆಡೆ ಸೇರಿರಲು ಖಂಡಿತ ಸಾಧ್ಯವಿಲ್ಲ.

ಈ ಕುರಿತು ಪವಿತ್ರ ಕುರ್‌ಆನ್‌ನಲ್ಲಿರುವ ಎಲ್ಲ ಮಾತುಗಳನ್ನು ಉಲ್ಲೇಖಿಸಲು ಈ ಸಂಕ್ಷಿಪ್ತ ಉಪನ್ಯಾಸದಲ್ಲಿ ಹೇಗೆ ಸಾಧ್ಯ? ಆದರೂ ಕೆಲವು ಸೂಕ್ತಗಳನ್ನು ಇಲ್ಲಿ ನಿಮ್ಮ ಮುಂದಿಡುತ್ತಿದ್ದೇನೆ:

"ಜನರೇನು, ನಾವು ವಿಶ್ವಾಸವಿರಿಸಿದೆವು, ಎಂದು ಹೇಳಿದ ಮಾತ್ರಕ್ಕೆ ಅವರನ್ನು ಹಾಗೆಯೇ ಬಿಟ್ಟು ಬಿಡಲಾಗುವುದೆಂದು ಮತ್ತು ಅವರನ್ನು ಪರೀಕ್ಷೆಗೆ ಒಳಪಡಿಸಲಾಗುವುದಿಲ್ಲವೆಂದು ಭಾವಿಸಿಕೊಂಡಿರುವರೇ? ನಿಜವಾಗಿ ಇವರಿಗಿಂತ ಮುಂಚೆಯೂ ನಾವು ವಿಶ್ವಾಸವಿರಿಸಿದೆವೆಂದು ಹೇಳಿಕೊಂಡವರನ್ನು ನಾವು ಪರೀಕ್ಷೆಗೆ ಒಳಪಡಿಸಿದ್ದೆವು-ನಮಗಂತೂ, ಯಾರು ಸತ್ಯವಂತರು ಮತ್ತು ಯಾರು ಸುಳ್ಳುಗಾರರು ಎಂಬುದನ್ನು ನೋಡಲೇ ಬೇಕಾಗಿದೆ." (29:2,3)

"ಜನರ ಪೈಕಿ ಕೆಲವರು ನಾವು ಅಲ್ಲಾಹನ ಮೇಲೆ ವಿಶ್ವಾಸವಿರಿಸಿದೆವು ಎಂದು

ಹೇಳಿಕೊಳ್ಳುತ್ತಾರೆ. ಆದರೆ ಅಲ್ಲಾಹನ ಮಾರ್ಗದಲ್ಲಿ ಸತಾಯಿಸಲ್ಪಟ್ಟಾಗ ಅವರು, ಅಲ್ಲಾಹನ ಶಿಕ್ಷೆಗೆ ಭಯಪಡಬೇಕಾದ ರೀತಿಯಲ್ಲಿ ಮಾನವರ ಶಿಕ್ಷೆಗೆ ಭಯಪಟ್ಟರು. ವಸ್ತುತಃ ನಿನ್ನ ಪ್ರಭುವಿನ ಕಡೆಯಿಂದ ವಿಜಯವು ಪ್ರಾಪ್ತವಾದರೆ ಇವರೇ ಬಂದು ನಾವಂತು ನಿಮ್ಮ ಜೊತೆಗೇ ಇದ್ದೆವು ಎಂದು ಹೇಳುವರು. ಜನರ ಮನಸ್ಸಿನೊಳಗಿರುವ ವಿಷಯಗಳೆಲ್ಲಾ ಅಲ್ಲಾಹನಿಗೇನು ತಿಳಿದಿಲ್ಲವೇ? ಆದರೂ ಅವನು ಯಾರು ಸತ್ಯವಿಶ್ವಾಸಿಗಳು ಮತ್ತು ಯಾರು ಕಪಟಿಗಳು ಎಂಬುದನ್ನು ನೋಡಿಯೇ ತೀರುವನು." (29:10,11)

"ಸತ್ಯವಿಶ್ವಾಸಿಗಳನ್ನು ಅವರು ಈಗ ಇರುವಂತಹ ಸ್ಥಿತಿಯಲ್ಲೇ ಇರಲು ಬಿಡುವುದು ಅಲ್ಲಾಹನ ನಿಯಮವಲ್ಲ. ಅವನು (ಸತ್ವ ಪರೀಕ್ಷೆಗಳ ಮೂಲಕ) ದುಷ್ಟರನ್ನು ಶಿಷ್ಟರಿಂದ ಬೇರ್ಪಡಿಸಿಯೇ ತೀರುವನು." (3:179)

"ನೀವೇನು ನಿಮ್ಮನ್ನು ಹೀಗೆಯೇ ಬಿಟ್ಟು ಬಿಡಲಾಗುವುದೆಂದು ಭಾವಿಸಿಕೊಂಡಿರುವಿರಾ? ವಸ್ತುತಃ ಅಲ್ಲಾಹನಂತು, ನಿಮ್ಮ ಪೈಕಿ ಜಿಹಾದ್ ಮಾಡಿದವರು ಯಾರು ಮತ್ತು ಅಲ್ಲಾಹ್, ಆತನ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳ ಹೊರತು ಇತರರೊಂದಿಗೆ ರಹಸ್ಯ ಸಂಬಂಧಗಳನ್ನು ಇಟ್ಟುಕೊಂಡವರು ಯಾರೆಂಬುದನ್ನು ಈಗಿನ್ನೂ ನೋಡಿಲ್ಲ." (9:16)

"ಅಲ್ಲಾಹನ ಕ್ರೋಧಕ್ಕೆ ಪಾತ್ರರಾದ ಜನರೊಂದಿಗೆ ನಿಕಟವಾಗಿ ಸಹಕರಿಸುತ್ತಿರುವವರನ್ನು ನೀವು ನೋಡಲಿಲ್ಲವೇ? ಇವರು ನಿಮ್ಮವರೂ ಅಲ್ಲ, ಅವರವರೂ ಅಲ್ಲ... ಇವರು ಶೈತಾನನ ಪಕ್ಷದವರು, ನಿಮಗೆ ತಿಳಿದಿರಲಿ, ಕೊನೆಗೆ ಶೈತಾನನ ಪಕ್ಷದವರೇ ನಷ್ಟದಲ್ಲಿರುವರು. ಖಂಡಿತವಾಗಿಯೂ, ಅಲ್ಲಾಹ್ ಮತ್ತು ಆತನ ಸಂದೇಶವಾಹಕರ ವಿರುದ್ಧ ಹೋರಾಡುವವರು(ಅರ್ಥಾತ್ ಧರ್ಮಸಂಸ್ಥಾಪನೆಯ ಹಿತಾಸಕ್ತಿಗೆ ವಿರುದ್ಧವಾಗಿ ಸಕ್ರಿಯರಾಗಿರುವವರು) ಸೋಲುಣ್ಣುವವರ ಸಾಲಿಗೆ ಸೇರುವರು. ನಾನು ಮತ್ತು ನನ್ನ ಸಂದೇಶವಾಹಕರೇ ವಿಜಯಿಗಳಾಗುವೆವು ಎಂಬುದು ಅಲ್ಲಾಹನ ತೀರ್ಮಾನವಾಗಿದೆ. ನಿಸ್ಸಂದೇಹವಾಗಿಯೂ ಅಲ್ಲಾಹನು ಅತ್ಯಂತ ಶಕ್ತಿಶಾಲಿಯೂ ಪ್ರಚಂಡನೂ ಆಗಿರುವನು." (58:14, 19, 21)

ಪ್ರಸ್ತುತ ಸೂಕ್ತಗಳಲ್ಲಿ ಪವಿತ್ರ ಕುರ್‌ಆನ್, ಸತ್ಯಧರ್ಮವನ್ನು ಸಂಸ್ಥಾಪಿಸುವ ನಿಟ್ಟಿನಲ್ಲಿ ಸಂಕಷ್ಟಗಳು ಎದುರಾಗುತ್ತವೆಂದು ನೆಪ ಹೂಡುವ ಜನರಿಗೂ ಸೂಕ್ತ ಉತ್ತರ ನೀಡಿದೆ. ಸತ್ಯಧರ್ಮವನ್ನು ಸ್ಥಾಪಿಸಲು ಪ್ರಯತ್ನಿಸುವಾಗಲೆಲ್ಲಾ, ಮೊದಲೇ

ಪ್ರಬಲವಾಗಿ ಸ್ಥಾಪಿತವಾಗಿರುವ ಯಾವುದಾದರೂ ಮಿಥ್ಯ ವ್ಯವಸ್ಥೆಯು ಅಸ್ತಿತ್ವದಲ್ಲಿರುವುದು, ಶಕ್ತಿಯೂ ಅದರ ಬಳಿ ಇರುವುದು, ಜೀವನಾಧಾರಗಳೆಲ್ಲಾ ಅದರ ಕಪಿ ಮುಷ್ಟಿಯಲ್ಲಿರುವವು ಮತ್ತು ಜೀವನದ ಎಲ್ಲ ರಂಗಗಳಲ್ಲೂ ಆ ವ್ಯವಸ್ಥೆಯೇ ತನ್ನನ್ನು ಹೇರಿಕೊಂಡಿರುವುದು ಎಂಬುದು ವ್ಯಕ್ತ. ಇಂತಹ ಸ್ಥಾಪಿತ ವ್ಯವಸ್ಥೆಯೊಂದನ್ನು ಉಚ್ಚಾಟಿಸಿ ಅದರ ಸ್ಥಾನದಲ್ಲಿ ಸತ್ಯಧರ್ಮವನ್ನು ಸಂಸ್ಥಾಪಿಸುವ ಕೆಲಸ ಹೂಮಂಚದಲ್ಲಿ ಮಲಗುವಂತಹ ಸುಲಭದ ಕೆಲಸವಂತೂ ಅಲ್ಲ. ಈ ಕಾರ್ಯವನ್ನು ಬಹಳ ನಿರಾತಂಕವಾಗಿ, ಆರಾಮವಾಗಿ ಹೆಜ್ಜೆ ಯಿಡುತ್ತಾ ಸಾಧಿಸುತ್ತೇವೆಂದು ಹೊರಟರೆ ಹಿಂದೆಯೂ ಅದು ಸಾಧ್ಯವಾಗಿಲ್ಲ, ಮುಂದೆಯೂ ಅದು ಸಾಧ್ಯವಾಗಲಾರದು. ಮಿಥ್ಯ ವ್ಯವಸ್ಥೆಯ ಅಧೀನದಲ್ಲಿ ಬದುಕುತ್ತಿರುವಾಗ ದಕ್ಕುತ್ತಿರುವಂತಹ ಕಿಂಚಿತ್ ಸೌಲಭ್ಯಗಳು ಕೂಡಾ ಕೈ ಬಿಟ್ಟು ಹೋಗಬಾರದು ಮತ್ತು ಅದೇ ವೇಳೆ ಸತ್ಯಧರ್ಮದ ಸಂಸ್ಥಾಪನೆಯೂ ಆಗ ಬೇಕು ಎಂದು ನೀವು ಅಪೇಕ್ಷಿಸುವುದಾದರೆ. ಇದು ಖಂಡಿತ ಅಸಂಭವನೀಯ. ನಿಜಕ್ಕೂ ನೀವು ಸತ್ಯಧರ್ಮವನ್ನು ಸ್ಥಾಪಿಸ ಬಯಸುವುದಾದಲ್ಲಿ ಮಿಥ್ಯ ವ್ಯವಸ್ಥೆಯ ಅಧೀನದಲ್ಲಿ ನಿಮಗೆ ಸಿಗುತ್ತಿರುವ ಎಲ್ಲ ಹಕ್ಕುಗಳನ್ನು, ಎಲ್ಲ ಲಾಭಗಳನ್ನು ಮತ್ತು ಎಲ್ಲ ಸೌಲಭ್ಯ ಮತ್ತು ಐಶಾರಾಮಗಳನ್ನು ಒದ್ದು ತೊರೆದು ಬಿಡಲು ನೀವು ಸಿದ್ಧರಾಗಲೇಬೇಕು ಮತ್ತು ಈ ಹೋರಾಟದಿಂದಾಗಿ ಎದುರಾಗುವ ಎಲ್ಲ ನಷ್ಟಗಳನ್ನು ಧೈರ್ಯದಿಂದ ಸ್ವಾಗತಿಸಲು ಸಿದ್ಧರಾಗಿರಬೇಕು. ಯಾರು ಈ ಎಲ್ಲ ಸವಾಲುಗಳನ್ನು ಎದುರಿಸಬಲ್ಲರೋ ಅವರು ಮಾತ್ರ ಅಲ್ಲಾಹನ ಮಾರ್ಗದ ಈ ಜಿಹಾದ್ ಅಥವಾ ಹೋರಾಟವನ್ನು ಮಾಡಬಲ್ಲರು. ಎಲ್ಲ ಕಾಲಗಳಲ್ಲೂ ಇಂತಹವರು ಬಹಳ ಕಡಿಮೆ ಸಂಖ್ಯೆಯಲ್ಲೇ ಕಂಡು ಬರುತ್ತಾರೆ. ಅತ್ತ ತಾವು ಸತ್ಯಧರ್ಮವನ್ನು ಅನುಸರಿಸುತ್ತಲೂ ಇರಬೇಕು, ಜೊತೆಗೆ ಆರಾಮವಾಗಿಯೂ ಇರಬೇಕು ಎಂದು ಬಯಸುವವರಿಗೆ, ದೊಡ್ಡ ದೊಡ್ಡ ಮಾತುಗಳು ಶೋಭೆ ನೀಡುವುದಿಲ್ಲ. ಅವರು ಎಲ್ಲಾದರೂ ಆರಾಮವಾಗಿ ಕುಳಿತು ತಮಗೆ ತಾವೇ ಸೇವೆ ಸಲ್ಲಿಸಿಕೊಂಡಿರುವರು ದೇವ ಮಾರ್ಗದಲ್ಲಿ ಸಂಕಷ್ಟಗಳನ್ನು ಎದುರಿಸುವವರು ತಮ್ಮ ತ್ಯಾಗಗಳಿಂದ ಕೊನೆಗೊಮ್ಮೆ ಸತ್ಯಧರ್ಮವನ್ನು ಸಂಸ್ಥಾಪಿಸಿದಾಗ, ಮುಂದೆ ಬಂದು "ನಾವೂ ನಿಮ್ಮ ಜೊತೆಗಿದ್ದೆವು" (ನೋಡಿರಿ, ಪವಿತ್ರ ಕುರ್‌ಆನ್-29:10) ಎಂದು ಹೇಳುತ್ತಾ ಅದರಲ್ಲಿ ತಮ್ಮ ಪಾಲು ಕೇಳುವರು.

---